# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೫, ೨೦೧೬ (ಭಾದ್ರಪದ ೨೪, ಶಕ ವರ್ಷ ೧೯೩೮)<br>Bengaluru, Thursday, September 15, 2016 ( Bhadrapada 24, Shaka Varsha 1938) | ಸಂಚಿಕೆ ೩೭<br>Issue 37 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಹಕಾರ ಸಚಿವಾಲಯ

**ವಿಷಯ :** ರಾಜ್ಯದ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ರಿಯಾಯಿತಿ ಬಡ್ಡಿದರದಲ್ಲಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲ ಒದಗಿಸುವ ಯೋಜನೆಯನ್ನು ಮಾರ್ಪಡಿಸಿ ಮುಂದುವರಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ:ಸಿಒ 182 ಸಿಎಲ್ಎಸ್ 2015, ದಿನಾಂಕ: 26.10.2015.
2. ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 55 ವೆಚ್ಚ–2/2016, ದಿನಾಂಕ:01.04.2016.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಆರ್‌ಸಿಎಸ್/ಸಿಆರ್‌ಡಿ/ಸಿಎಬಿ–1/4/2015–16, ದಿನಾಂಕ:23.04.2016.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2015–16ನೇ ಸಾಲಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ರಾಜ್ಯದ ರೈತರಿಗೆ ₹.10.00 ಲಕ್ಷಗಳವರೆಗಿನ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲಗಳನ್ನು ಶೇಕಡಾ 3ರ ಬಡ್ಡಿ ದರದಲ್ಲಿ ಒದಗಿಸುವ ಯೋಜನೆಯನ್ನು ಮುಂದುವರೆಸಿ ಜಾರಿಗೊಳಿಸಲು ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶ ಹೊರಡಿಸಲಾಗಿರುತ್ತದೆ.

2016–17ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 66ರಲ್ಲಿ ಶೇ.3ರ ಬಡ್ಡಿ ದರದಲ್ಲಿ ₹.10.00 ಲಕ್ಷಗಳವರೆಗಿನ ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ವಿತರಿಸುವ ಯೋಜನೆಯನ್ನು ಮುಂದುವರೆಸಲಾಗುವುದೆಂದು ಹಾಗೂ ಕಂಡಿಕೆ 71ರಲ್ಲಿ ಕೇಂದ್ರ ಸರ್ಕಾರದಿಂದ ಬಂಡವಾಳ ಸಹಾಯಧನವು (Capital subsidy) ಲಭ್ಯವಿರುವ ಪಾಲಿ ಹೌಸ್‌ಗಳಲ್ಲಿ ಬೆಳೆ ಬೆಳೆಯುವ ಹಾಗೂ ಸೌರಶಕ್ತಿ ಪಂಪ್ ಸೆಟ್‌ಗಳನ್ನು (Solar Pumpsets) ಅಳವಡಿಸುವ ಯೋಜನೆಗಳಿಗೆ ₹.10 ಲಕ್ಷಗಳವರೆಗಿನ ಸಾಲವನ್ನು ಶೇ.3ರ ಬಡ್ಡಿ ದರದಲ್ಲಿ ಒದಗಿಸಲಾಗುವುದು ಎಂದು ಮತ್ತು ಈ ಯೋಜನೆಗೆ ₹.25.00 ಲಕ್ಷ ಮಿತಿಯನ್ನು ವಿಧಿಸಲಾಗುವುದೆಂದು ಘೋಷಿಸಲಾಗಿರುತ್ತದೆ.

ಮೇಲೆ ಓದಲಾದ (2)ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಆಯವ್ಯಯ ಭಾಷಣದಲ್ಲಿ ಘೋಷಿರುವಂತೆ ಸದರಿ ಯೋಜನೆಗೆ ಲೆಕ್ಕ ಶೀರ್ಷಿಕೆ 2425–00–107–2–41 ರಡಿ ₹.88881.00 ಲಕ್ಷಗಳ ಅನುದಾನ ಹಂಚಿಕೆ ಮಾಡಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (3) ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2016–17ನೇ ಸಾಲಿಗೆ ಆಯವ್ಯಯ ಭಾಷಣದ ಕಂಡಿಕೆ 71 ರಲ್ಲಿ ಪ್ರಸ್ತಾಪಿಸಿರುವ ಹೊಸ ಯೋಜನೆಯಾದ ಪಾಲಿಹೌಸ್ ಮತ್ತು ಸೋಲಾರ್ ಪಂಪ್‌ಸೆಟ್ ಸಾಲಗಳನ್ನು ವಿತರಿಸಲು ಅನುವಾಗುವಂತೆ ಓದಲಾದ (1) ರ ಆದೇಶದಲ್ಲಿ ಸೂಕ್ತವಾಗಿ ಅಳವಡಿಸಿ ಶೇ.3ರ ಬಡ್ಡಿದರದಲ್ಲಿ ₹.10ಲಕ್ಷಗಳವರೆಗಿನ ಮಧ್ಯಮಾವಧಿ ಹಾಗೂ ದೀರ್ಘಾವಧಿ ಕೃಷಿ ಸಾಲಗಳನ್ನು ವಿತರಿಸುವ ಯೋಜನೆಯನ್ನು ಜಾರಿಗೊಳಿಸಲು ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶ ಹೊರಡಿಸಲು ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 244 ಸಿಎಲ್ಎಸ್ 2016, ಬೆಂಗಳೂರು, ದಿನಾಂಕ: 16.05.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2016–17ನೇ ಸಾಲಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ರಾಜ್ಯದ ರೈತರಿಗೆ ₹.10.00 ಲಕ್ಷಗಳವರೆಗಿನ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲಗಳನ್ನು ಶೇಕಡಾ 3ರ ಬಡ್ಡಿ ದರದಲ್ಲಿ ಒದಗಿಸಲು ಯೋಜನೆಯನ್ನು ಮುಂದುವರೆಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ.

1. ಈ ಯೋಜನೆಯು ದಿನಾಂಕ:01.04.2016ರಿಂದ ಗೊತ್ತುಪಡಿಸಿದ ಪತ್ತಿನ ಸಹಕಾರಿ ಸಂಸ್ಥೆಗಳು ಅಂದರೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಲ್ಯಾಂಪ್ಸ್ ಸಹಕಾರ ಸಂಘಗಳು, ಟಿಬೇಟಿಯನ್ ಸಹಕಾರ ಸಂಘಗಳು, ಪಿಕಾರ್ಡ್ ಬ್ಯಾಂಕುಗಳು ಮತ್ತು ಪಟ್ಟಣ ಸಹಕಾರ ಬ್ಯಾಂಕುಗಳು ರೈತರಿಗೆ ನೀಡುವ ಮಧ್ಯಮಾವಧಿ ಹಾಗೂ ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲಗಳಿಗೆ ಮಾತ್ರ ಅನ್ವಯಿಸುತ್ತವೆ.

2. ಪತ್ತಿನ ಸಹಕಾರಿ ಸಂಸ್ಥೆಗಳು ತನ್ನ ರೈತ ಸದಸ್ಯರಿಗೆ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ/ಕೃಷಿ ಸಂಬಂಧಿತ ಸಾಲಗಳನ್ನು ಶೇಕಡಾ 3ರ ಬಡ್ಡಿ ದರದಲ್ಲಿ ಒದಗಿಸುವ ಯೋಜನೆಯು ₹.10.00ಲಕ್ಷಗಳವರೆಗಿನ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ. ₹.10.00 ಲಕ್ಷಕ್ಕಿಂತ ಮೇಲ್ಪಟ್ಟ ಸಾಲಗಳಿಗೆ, ಸಂಪೂರ್ಣ ಮೊತ್ತಕ್ಕೆ ಪತ್ತಿನ ಸಹಕಾರಿ ಸಂಸ್ಥೆಗಳು ವಿಧಿಸುವ ಸಾಮಾನ್ಯ ಬಡ್ಡಿ ದರವು ಅನ್ವಯವಾಗುತ್ತದೆ.

3. ನಬಾರ್ಡಿನವರು ಗುರುತಿಸಿದ ಕೃಷಿ/ಕೃಷಿ ಸಂಬಂಧಿತ ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳಿಗೆ ಅಂದರೆ ಲಘು ನೀರಾವರಿ, ಭೂ ಅಭಿವೃದ್ಧಿ, ಕೃಷಿ ಯಾಂತ್ರೀಕರಣ, ಪ್ಲಾಂಟೇಷನ್ ಹಾಗೂ ತೋಟಗಾರಿಕೆ ಅಭಿವೃದ್ಧಿ, ಸಾವಯವ ಕೃಷಿ, ಪಶುಸಂಗೋಪನೆ ಹಾಗೂ ಹೈನುಗಾರಿಕೆ, ಮೀನು ಕೃಷಿ, ರೇಷ್ಮೆ ಕೃಷಿ ಉದ್ದೇಶಗಳಿಗೆ ನೀಡಲಾಗುವ ₹.10.00 ಲಕ್ಷಗಳವರೆಗಿನ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ. ಜೀಪು, ಪಿಕಪ್ ವ್ಯಾನ್ ಹಾಗೂ ಇನ್ನೂ ಮುಂತಾದ ಯಾವುದೇ ಕೃಷಿ ಸಾಗಾಣಿಕೆಗೆ ಬಳಸುವ ವಾಹನ ಸಾಲಗಳಿಗೆ ಈ ಯೋಜನೆ ಅನ್ವಯವಾಗುವುದಿಲ್ಲ ಹಾಗೂ ಇಂತಹ ಸಾಲಗಳಿಗೆ ಬ್ಯಾಂಕು ನಿಗಧಿಪಡಿಸಿದ ಸಾಮಾನ್ಯ ಬಡ್ಡಿದರದಲ್ಲಿ ಸಾಲ ವಿತರಿಸಬಹುದಾಗಿದೆ.

4. ಕೇಂದ್ರ ಸರ್ಕಾರದಿಂದ ಬಂಡವಾಳ ಸಹಾಯಧನವು (Capital Subsidy) ಲಭ್ಯವಿರುವ ಪಾಲಿ ಹೌಸ್‌ಗಳಲ್ಲಿ ಬೆಳೆ ಬೆಳೆಯುವ ಹಾಗೂ ಸೌರಶಕ್ತಿ ಪಂಪ್ ಸೆಟ್‌ಗಳನ್ನು (Solar pumpsets) ಅಳವಡಿಸುವ ಯೋಜನೆಗಳಿಗೆ ₹.10ಲಕ್ಷಗಳವರೆಗಿನ ಸಾಲಗಳಿಗೂ ಸಹ ಶೇ.3ರ ಬಡ್ಡಿ ದರ ಅನ್ವಯವಾಗುತ್ತದೆ. ಕೇಂದ್ರ ಸರ್ಕಾರ ನಿಗಧಿಪಡಿಸಿದ ಷರತ್ತುಗಳನ್ವಯ ಗರಿಷ್ಟ ₹.25ಲಕ್ಷಗಳವರೆಗೆ ಮಂಜೂರಾದ ಸಾಲಗಳಿಗೆ ಮೊದಲ ₹.10ಲಕ್ಷಗಳವರೆಗಿನ ಸಾಲಕ್ಕೆ ಶೇ.3ರ ಬಡ್ಡಿ ದರ ಅನ್ವಯವಾಗುತ್ತದೆ. ಉಳಿದ ಮೊತ್ತಕ್ಕೆ ಸಂಘಗಳು ವಿಧಿಸುವ ಸಾಮಾನ್ಯ ಬಡ್ಡಿ ದರ ಅನ್ವಯವಾಗುತ್ತದೆ.

   ಸೌರಶಕ್ತಿ ಪಂಪ್ ಸೆಟ್‌ಗಳಿಗೆ ನೀಡುವ ಸಾಲಗಳಿಗೆ ನಬಾರ್ಡ್ ಸಂಸ್ಥೆಗೆ ಮತ್ತು ಪಾಲಿ ಹೌಸ್‌ಗಳಲ್ಲಿ ಬೆಳೆ ಬೆಳೆಯಲು ನೀಡುವ ಸಾಲಗಳಿಗೆ ಎನ್‌ಹೆಚ್‌ಬಿ ಸಂಸ್ಥೆಗಳಿಗೆ ಸಾಲ ನೀಡಿದ ಕೂಡಲೇ ಪತ್ತಿನ ಸಹಕಾರಿ ಸಂಸ್ಥೆಗಳು ಪ್ರಸ್ತಾವೆ ಸಲ್ಲಿಸಿ, ಸದರಿ ಸಂಸ್ಥೆಗಳಿಂದ ಸಹಾಯಧನ ನೀಡಲು ಪರಿಗಣಿಸಿದ ಸಾಲದ ಖಾತೆಗಳಿಗೆ ಮಾತ್ರ ಶೇ.3ರ ಬಡ್ಡಿ ದರ ಅನ್ವಯವಾಗುತ್ತದೆ. ಕೇಂದ್ರ ಸರ್ಕಾರದಿಂದ ಬಂಡವಾಳ ಸಹಾಯಧನವು ಬಿಡುಗಡೆಯಾದ ನಂತರ ಉಳಿಯುವ ₹.10ಲಕ್ಷಗಳವರೆಗಿನ ಸಾಲದ ಮೊತ್ತಕ್ಕೆ ಮಾತ್ರ ಶೇ.3ರ ಬಡ್ಡಿ ದರ ಅನ್ವಯವಾಗುತ್ತದೆ.

5. ಈ ಯೋಜನೆಯು ಪತ್ತಿನ ಸಹಕಾರಿ ಸಂಸ್ಥೆಗಳು ನೀಡುವ ಕೃಷಿಯೇತರ ಸಾಲಗಳಿಗೆ ಅನ್ವಯಿಸುವುದಿಲ್ಲ.

6. ಈ ಯೋಜನೆಯಡಿ ರೈತರಿಗೆ ಪ್ರಾಥಮಿಕ ಹಂತದಲ್ಲಿ ಪತ್ತಿನ ಸಹಕಾರಿ ಸಂಸ್ಥೆಗಳು ಒದಗಿಸುವ ಸಾಲಗಳ ವಸೂಲಾತಿ ಆಧಾರದ ಮೇಲೆ ನಿಗದಿತ ಪ್ರಮಾಣದ ಬಡ್ಡಿ ಸಹಾಯಧನವನ್ನು ಸರ್ಕಾರವು ಸಂಬಂಧಪಟ್ಟ ಪತ್ತಿನ ಸಹಕಾರ ಸಂಘಗಳಿಗೆ, ಪಟ್ಟಣ ಸಹಕಾರ ಬ್ಯಾಂಕುಗಳಿಗೆ ಹಾಗೂ ಜಿಲ್ಲಾ ಕೇಂದ್ರ ಸಹಕಾರ(ಡಿ.ಸಿ.ಸಿ) ಬ್ಯಾಂಕುಗಳಿಗೆ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನ ಮೂಲಕ ಹಾಗೂ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಸಹಕಾರಿ ಬ್ಯಾಂಕುಗಳಿಗೆ(ಪಿಕಾರ್ಡ್ ಬ್ಯಾಂಕುಗಳಿಗೆ) ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ(ಕಸ್ಕಾರ್ಡ್) ಬ್ಯಾಂಕಿನ ಮೂಲಕ ಬಿಡುಗಡೆ ಮಾಡಲಾಗುತ್ತದೆ.

7. ಮೂರು ಹಂತಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ಈ ಕೆಳಗೆ ಸೂಚಿಸಿದಂತೆ ಸಾಲ ನೀಡತಕ್ಕದ್ದು:–

   ಅ) (i) ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ರೈತರು ಪಾವತಿಸುವ ಶೇಕಡಾ 3.00ರ ಬಡ್ಡಿ ದರದಲ್ಲಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಿಂದ ಪಡೆದ ಸಾಲಗಳಿಗೆ ಸಂಬಂಧಿಸಿದಂತೆ ತಾವು ಹೊಂದಬೇಕಾದ ಮಾರ್ಜಿನ್ ಮತ್ತು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಿಗೆ ಪಾವತಿಸಬೇಕಾದ ಬಡ್ಡಿ ದರ ಹಾಗೂ ಡಿಸಿಸಿ ಬ್ಯಾಂಕುಗಳಿಗೆ ಸರ್ಕಾರ ನೀಡುವ ಬಡ್ಡಿ ಸಹಾಯಧನದ ದರವನ್ನು ಸರ್ಕಾರವು ಪ್ರತ್ಯೇಕವಾಗಿ ನಿಗಧಿಪಡಿಸಿ ಆದೇಶ ಹೊರಡಿಸಲಾಗುವುದು.

   (ii) ಒಂದು ವೇಳೆ ಪತ್ತಿನ ಸಹಕಾರ ಸಂಘಗಳು ತಮ್ಮ ಸ್ವಂತ ಸಂಪನ್ಮೂಲದಿಂದ ಇಂತಹ ಸಾಲಗಳನ್ನು ನೀಡಿದಾಗ ಅಂತಹ ಸಾಲಗಳ ಮೇಲೆ ರಾಜ್ಯ ಸರ್ಕಾರದಿಂದ ದೊರೆಯುವ ಬಡ್ಡಿ ಸಹಾಯಧನವನ್ನು ಡಿಸಿಸಿ ಬ್ಯಾಂಕುಗಳು ಆಯಾ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ಕಡ್ಡಾಯವಾಗಿ ವರ್ಗಾಯಿಸತಕ್ಕದ್ದು.

   (iii) ಪತ್ತಿನ ಸಹಕಾರ ಸಂಘಗಳು ತಮ್ಮ ಸದಸ್ಯರಿಗೆ ನೀಡುವ ಮಧ್ಯಮಾವದಿ ಕೃಷಿ/ಕೃಷಿ ಸಂಬಂಧಿತ ₹. 10.00ಲಕ್ಷಗಳವರೆಗಿನ ಸಾಲಗಳಿಗೆ ಮಾತ್ರ ಶೇಕಡಾ 3ರ ಬಡ್ಡಿದರ ವಿಧಿಸತಕ್ಕದ್ದು, ಸಾಲದ ಪ್ರಮಾಣವು ₹. 10.00 ಲಕ್ಷಕ್ಕಿಂತ ಹೆಚ್ಚಿದ್ದಲ್ಲಿ ಸಂಪೂರ್ಣ ಮೊತ್ತಕ್ಕೆ ಕೃಷಿ ಪತ್ತಿನ ಸಹಕಾರ ಸಂಘಗಳು ವಿಧಿಸುವ ಸಾಮಾನ್ಯ ಬಡ್ಡಿ ದರವು ಅನ್ವಯವಾಗುತ್ತದೆ.

   (iv) ಪತ್ತಿನ ಸಹಕಾರ ಸಂಘಗಳು ತಾವು ನೀಡುವ ಕೃಷಿ/ಕೃಷಿ ಸಂಬಂಧಿತ ಸಾಲಗಳ ಮರುಪಾವತಿ ಆಧಾರದ ಮೇಲೆ ರಾಜ್ಯ ಸರ್ಕಾರವು ಗೊತ್ತುಪಡಿಸಿದ ಬಡ್ಡಿ ದರದಲ್ಲಿ ಹಾಗೂ ವಿಧಿಸಿದ ನಿಬಂಧನೆಗಳಿಗೊಳಪಟ್ಟು ಬಡ್ಡಿ ಸಹಾಯಧನದ ಬಿಲ್ಲುಗಳನ್ನು ತ್ರೈಮಾಸಿಕವಾಗಿ ತಯಾರಿಸತಕ್ಕದ್ದು.

   (v) ತ್ರೈಮಾಸಿಕ ಮುಗಿದ ಒಂದು ತಿಂಗಳೊಳಗಾಗಿ ಪತ್ತಿನ ಸಹಕಾರ ಸಂಘಗಳು ಬಡ್ಡಿ ಸಹಾಯಧನದ ಬಿಲ್ಲುಗಳನ್ನು ಸಿದ್ದಪಡಿಸಿ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸುವ ಹೊಣೆಯನ್ನು ಡಿಸಿಸಿ ಬ್ಯಾಂಕುಗಳ ವ್ಯವಸ್ಥಾಪಕ ನಿರ್ದೇಶಕರು ಮತ್ತು ಜಿಲ್ಲೆಗಳ ಸಹಕಾರ ಸಂಘಗಳ ಉಪ ನಿಬಂಧಕರು ಇವರುಗಳು ವಹಿಸತಕ್ಕದ್ದು.

   (vi) ಒಂದು ಪಕ್ಷ ಪತ್ತಿನ ಸಹಕಾರ ಸಂಘಗಳು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳ ಬದಲಾಗಿ ವಾಣಿಜ್ಯ ಬ್ಯಾಂಕುಗಳಿಂದ ಕೃಷಿ/ಕೃಷಿ ಸಂಬಂಧಿತ ಸಾಲ ಪಡೆದು ರೈತರಿಗೆ ವಿತರಣೆ ಮಾಡಿದಲ್ಲಿ ಅಥವಾ ವಾಣಿಜ್ಯ ಬ್ಯಾಂಕುಗಳಿಗೆ ಸಂಯೋಜಿಸಲ್ಪಟ್ಟ ಪತ್ತಿನ ಸಹಕಾರ ಸಂಘಗಳು ತಮ್ಮ ಸ್ವಂತ ಸಂಪನ್ಮೂಲಗಳಿಂದ ಕೃಷಿ/ಕೃಷಿ ಸಂಬಂಧಿತ ಸಾಲಗಳನ್ನು ನೀಡಿದಾಗ ಬಡ್ಡಿ ಸಹಾಯಧನದ ಹೊಂದಾಣಿಕೆ ವಿಷಯದಲ್ಲಿ ಮೇಲೆ ಸೂಚಿಸಿದ ನಿಯಮಗಳನ್ನೇ ಪಾಲಿಸತಕ್ಕದ್ದು.

ಆ) (i) ಕಸ್ಕಾರ್ಡ್ ಬ್ಯಾಂಕು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳಿಗೆ ತಾನು ನಿಗಧಿಪಡಿಸುವ ಯುಕ್ತ ಬಡ್ಡಿ ದರದಲ್ಲಿ ಕೃಷಿ/ಕೃಷಿ ಸಂಬಂಧಿತ ಸಾಲಗಳನ್ನು ಒದಗಿಸತಕ್ಕದ್ದು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು ಶೇಕಡಾ 3ರ ಬಡ್ಡಿ ದರದಲ್ಲಿ ರೈತರಿಗೆ ₹. 10.00 ಲಕ್ಷದವರೆಗಿನ ಕೃಷಿ/ಕೃಷಿ ಸಂಬಂಧಿತ ಸಾಲಗಳನ್ನು ಒದಗಿಸತಕ್ಕದ್ದು. ಸಾಲದ ಪ್ರಮಾಣವು ₹.10.00 ಲಕ್ಷಕ್ಕಿಂತ ಹೆಚ್ಚಿದ್ದಲ್ಲಿ ಸಂಪೂರ್ಣ ಮೊತ್ತಕ್ಕೆ ಸಹಕಾರ ಸಂಘಗಳು ವಿಧಿಸುವ ಸಾಮಾನ್ಯ ಬಡ್ಡಿ ದರವು ಅನ್ವಯವಾಗುತ್ತದೆ.

(ii) ಪಿಕಾರ್ಡ್ ಬ್ಯಾಂಕುಗಳು ಇಂತಹ ಸಾಲಗಳನ್ನು ತಮ್ಮ ಸ್ವಂತ ಸಂಪನ್ಮೂಲಗಳಿಂದ ಒದಗಿಸಿದಾಗ ಅಷ್ಟರ ಮಟ್ಟಿಗೆ ಕಸ್ಕಾರ್ಡ್ ಬ್ಯಾಂಕು ಸರ್ಕಾರದಿಂದ ಪಡೆಯುವ ಬಡ್ಡಿ ಸಹಾಯಧನವನ್ನು ಪಿಕಾರ್ಡ್ ಬ್ಯಾಂಕುಗಳಿಗೆ ಕಡ್ಡಾಯವಾಗಿ ವರ್ಗಾಯಿಸತಕ್ಕದ್ದು.

ಇ) ಪಟ್ಟಣ ಸಹಕಾರ ಬ್ಯಾಂಕುಗಳು ₹.10.00 ಲಕ್ಷದವರೆಗೆ ನೀಡುವ ಮಧ್ಯಮಾವಧಿ ಕೃಷಿ/ಕೃಷಿ ಸಂಬಂಧಿತ ಸಾಲಗಳಿಗೆ ಶೇಕಡಾ 3ರ ಬಡ್ಡಿ ದರವನ್ನು ವಿಧಿಸತಕ್ಕದ್ದು. ಸಾಲದ ಪ್ರಮಾಣವು ₹.10.00 ಲಕ್ಷಕ್ಕಿಂತ ಹೆಚ್ಚಿದ್ದಲ್ಲಿ ಸಂಪೂರ್ಣ ಮೊತ್ತಕ್ಕೆ ಪಟ್ಟಣ ಸಹಕಾರ ಬ್ಯಾಂಕುಗಳು ವಿಧಿಸುವ ಸಾಮಾನ್ಯ ಬಡ್ಡಿ ದರವು ಅನ್ವಯವಾಗುತ್ತದೆ.

8. ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕು, ಡಿ.ಸಿ.ಸಿ.ಅ ಬ್ಯಾಂಕುಗಳು, ಪತ್ತಿನ ಸಹಕಾರ ಸಂಘಗಳು, ಕಸ್ಕಾರ್ಡ್ ಬ್ಯಾಂಕು, ಪಿಕಾರ್ಡ್ ಬ್ಯಾಂಕುಗಳು ಹಾಗೂ ಪಟ್ಟಣ ಸಹಕಾರ ಬ್ಯಾಂಕುಗಳು ರೈತರಿಗೆ ಕೃಷಿ/ಕೃಷಿ ಸಂಬಂಧಿತ ಸಾಲಗಳನ್ನು ಮೇಲೆ ನಿಗಧಿಪಡಿಸಿದ ಬಡ್ಡಿ ದರದಲ್ಲಿ ಒದಗಿಸಲು ಅಗತ್ಯವಾದ ಕ್ರಮವನ್ನು ಕೈಗೊಳ್ಳತಕ್ಕದ್ದು.

9. ಅ) ಈ ಯೋಜನೆಯಡಿ ವಿತರಿಸಲಾದ ಕೃಷಿ/ಕೃಷಿ ಸಂಬಂಧಿತ ಸಾಲಗಳಿಗೆ ಸಂಬಂಧಿಸಿದಂತೆ ಸರ್ಕಾರದ ಬದ್ಧತೆಯು ಸಾಲದ ಅವಧಿಗೆ ಸೀಮಿತವಾಗಿರುತ್ತದೆ. ಆದಾಗ್ಯೂ ರೈತರು ನಿಗಧಿತ ದಿನಾಂಕದಂದು ಸಾಲ ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದಲ್ಲಿ, ಅಥವಾ ಕ್ಲೇಂ ಮೊತ್ತಗಳನ್ನು ಯಾವುದೇ ಕಾರಣಗಳಿಂದಾಗಿ ವಿಳಂಭವಾದಲ್ಲಿ ಸರ್ಕಾರದ ಬದ್ಧತೆ ಇರುವುದಿಲ್ಲ.

ಆ) ಸಾಲಗಾರರು ಇಂತಹ ಮುದ್ದತ್ತು ಮೀರಿದ ಕಂತುಗಳಲ್ಲಿ ಇರುವ ಸಾಲಗಳನ್ನು ಸಾಮಾನ್ಯ ಬಡ್ಡಿಯ ದರದಲ್ಲಿ ಇತರ ವೆಚ್ಚಗಳೊಂದಿಗೆ ಮರುಪಾವತಿಸಬೇಕಾಗುತ್ತದೆ. ಒಂದು ವೇಳೆ ಮುದ್ದತ್ತು ಮೀರಿದ ಇಂತಹ ಸಾಲಗಳ ಕಂತುಗಳನ್ನು ಸಾಮಾನ್ಯ ಬಡ್ಡಿ ದರದೊಂದಿಗೆ ಇತರ ವೆಚ್ಚಗಳೊಂದಿಗೆ ಮರುಪಾವತಿಸಿದ ಪಕ್ಷದಲ್ಲಿ ನಂತರದ ಚಾಲ್ತಿ ಕಂತುಗಳಿಗೆ ಶೇಕಡಾ 3ರ ಬಡ್ಡಿಯ ರಿಯಾಯಿತಿಯ ಸೌಲಭ್ಯಗಳು ಮುಂದುವರೆಯುತ್ತವೆ.

ಇ) ಈ ಯೋಜನೆಯ ಅವಧಿಯಲ್ಲಿ ಬಡ್ಡಿ ಸಹಾಯಧನವು ಪೂರ್ಣವಾಗಿ ಮರುಪಾವತಿಯಾಗುವ ಸಾಲಗಳಿಗೆ ಮಾತ್ರ ದೊರೆಯುತ್ತದೆ. ಈ ಸೌಲಭ್ಯವು ಸಾಲ ಮರುಪಾವತಿಯ ಗಡುವಿನ ದಿನಾಂಕದವರೆಗೆ ಅಥವಾ ಪೂರ್ಣವಾಗಿ ಸಾಲ ಮರುಪಾವತಿಯಾದ ದಿನಾಂಕ ಇದರಲ್ಲಿ ಯಾವುದು ಮೊದಲೋ ಆ ಅವಧಿಗೆ ಬಡ್ಡಿ ಸಹಾಯಧನವು ಅನ್ವಯಿಸುತ್ತದೆ.

ಈ) ಪತ್ತಿನ ಸಹಕಾರ ಸಂಘಗಳು/ಬ್ಯಾಂಕುಗಳು ಬಡ್ಡಿ ಸಹಾಯಧನವನ್ನು ಸಂಬಂಧಿತ ಸಾಲಗಳ ವಸೂಲಾತಿ ಪ್ರಮಾಣವನ್ನು ಆಧರಿಸಿ, ತ್ರೈಮಾಸಿಕ ಕ್ಲೇಮು ಬಿಲ್ಲುಗಳನ್ನು ಸಿದ್ಧಪಡಿಸಿ ಸಮುಚಿತ ಮಾರ್ಗದಲ್ಲಿ ಸಹಕಾರ ಸಂಘಗಳ ನಿಬಂಧಕರ ಮಂಜೂರಾತಿಗಾಗಿ ಬೇಡಿಕೆ ಸಲ್ಲಿಸತಕ್ಕದ್ದು.

10. ಪತ್ತಿನ ಸಹಕಾರ ಸಂಘಗಳು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಿಗೆ ಸಂಯೋಜಿಸಲ್ಪಟ್ಟಿದ್ದಲ್ಲಿ ಸಂಬಂಧಿಸಿದ ಸಂಘಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಕ್ಲೇಮು ಬಿಲ್ಲುಗಳನ್ನು ತಯಾರಿಸಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳ ವ್ಯವಸ್ಥಾಪಕ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು. ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಕ್ಲೇಮು ಬಿಲ್ಲುಗಳನ್ನು ತಯಾರಿಸಿ ದೃಢೀಕರಿಸಿ ಜಿಲ್ಲೆಗೆ ಸಂಬಂಧಪಟ್ಟ ಲೆಕ್ಕಪರಿಶೋಧನಾ ಉಪನಿರ್ದೇಶಕರು ಮತ್ತು ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ಜಂಟಿಯಾಗಿ ದೃಢೀಕರಿಸಿ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಪ್ರಮಾಣೀಕರಿಸಿ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು. ಮೇಲಿನ ಅಧಿಕಾರಿಗಳು ಶೇ.10 ರಷ್ಟು ಸಂಘಗಳಲ್ಲಿನ ಶೇ.10 ರಷ್ಟು ಸಾಲದ ಖಾತೆಗಳನ್ನು ಪರಿಶೀಲಿಸಿ ಬಿಲ್ಲುಗಳನ್ನು ದೃಢೀಕರಿಸತಕ್ಕದ್ದು.

11. ಪತ್ತಿನ ಸಹಕಾರ ಸಂಘಗಳು ವಾಣಿಜ್ಯ ಬ್ಯಾಂಕುಗಳಿಗೆ ಸಂಯೋಜಿಸಲ್ಪಟ್ಟಿದ್ದಲ್ಲಿ ಸಂಬಂಧಪಟ್ಟ ಸಂಘಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಕ್ಷೇಮು ಬಿಲ್ಲುಗಳನ್ನು ತಯಾರಿಸಿ, ಜಿಲ್ಲೆಗೆ ಸಂಬಂಧಪಟ್ಟ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪನಿರ್ದೇಶಕರು ಮತ್ತು ಜಿಲ್ಲಾ ಸಹಕಾರ ಸಂಘಗಳ ಉಪನಿಂಬಂಧಕರು ಜಂಟಿಯಾಗಿ ದೃಢೀಕರಿಸಿ, ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು.

12. ಪಿಕಾರ್ಡ್ ಬ್ಯಾಂಕುಗಳಿಗೆ ಸಂಬಂಧಿಸಿದ ಕ್ಲೇಮು ಬಿಲ್ಲುಗಳನ್ನು ಸಂಬಂಧಿಸಿದ ಬ್ಯಾಂಕುಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ತಯಾರಿಸಿ ಕಸ್ಕಾರ್ಡ್ ಬ್ಯಾಂಕಿನ ಜಿಲ್ಲಾ ವ್ಯವಸ್ಥಾಪಕರಿಗೆ ಸಲ್ಲಿಸತಕ್ಕದ್ದು. ಕಸ್ಕಾರ್ಡ್ ಬ್ಯಾಂಕಿನ ಜಿಲ್ಲಾ ವ್ಯವಸ್ಥಾಪಕರು ಪ್ರಮಾಣೀಕರಿಸಿ ಜಿಲ್ಲೆಗೆ ಸಂಬಂಧಪಟ್ಟ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪನಿರ್ದೇಶಕರು ಮತ್ತು, ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ಜಂಟಿಯಾಗಿ ದೃಢೀಕರಿಸಿ, ನಂತರ ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಪ್ರಮಾಣಿಕರಿಸಿ, ಅನಂತರ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

13. ಪಟ್ಟಣ ಸಹಕಾರಿ ಬ್ಯಾಂಕುಗಳ/ಕೃಷಿಯೇತರ ಪತ್ತಿನ ಸಹಕಾರ ಸಂಘಗಳ ಕ್ಲೇಮು ಬಿಲ್ಲುಗಳನ್ನು ಸಂಬಂಧಪಟ್ಟ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ತಯಾರಿಸಿ, ಜಿಲ್ಲೆಗೆ ಸಂಬಂಧಪಟ್ಟ ಲೆಕ್ಕಪರಿಶೋಧನಾ ಉಪನಿರ್ದೇಶಕರು ಮತ್ತು ನಂತರ, ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ದೃಢೀಕರಿಸಿ, ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

14. ಪತ್ತಿನ ಸಹಕಾರ ಸಂಘಗಳಿಗೆ ಸಂಬಂಧಿಸಿದಂತೆ ಅಪೆಕ್ಸ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು, ಪಿಕಾರ್ಡ್ ಬ್ಯಾಂಕುಗಳಿಗೆ ಸಂಬಂಧಿಸಿದಂತೆ ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಹಾಗೂ ಪಟ್ಟಣ ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ ಸಹಕಾರ ಸಂಘಗಳ ನಿಬಂಧಕರ ಕಛೇರಿಯಲ್ಲಿರುವ ಸಹಕಾರ ಸಂಘಗಳ ಜಂಟಿ ನಿಬಂಧಕರು (ಪಟ್ಟಣ ಬ್ಯಾಂಕುಗಳ ಶಾಖೆ) ಇವರು ಎಲ್ಲಾ ಕ್ಲೇಮು ಬಿಲ್ಲುಗಳನ್ನು ಕ್ರೋಢೀಕರಿಸಿ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

15. ಸಹಕಾರ ಸಂಘಗಳ ನಿಬಂಧಕರು ಸದರಿ ಬಿಲ್ಲುಗಳನ್ನು ಪರಿಶೀಲಿಸಿ ಸಂಬಂಧಪಟ್ಟ ಸಹಕಾರ ಸಂಘ/ಸಹಕಾರ ಬ್ಯಾಂಕುಗಳಿಗೆ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನ ಮುಖಾಂತರ ಹಣ ಬಿಡುಗಡೆ ಮಾಡತಕ್ಕದ್ದು.

16. ಸಾಲ ಪಡೆಯುವ ರೈತರ ಪೈಕಿ ಹೊಸದಾಗಿ ಸಾಲ ಪಡೆಯುವ ರೈತರಿಗೆ ಆದ್ಯತೆ ನೀಡತಕ್ಕದ್ದು ಹಾಗೂ ಕನಿಷ್ಟ ಶೇ. 85 ರಷ್ಟು ಸಾಲವನ್ನು ಹೊಸ ಸದಸ್ಯರಿಗೆ ವಿತರಿಸತಕ್ಕದ್ದು.

17. ವಿತರಿಸಿದ ಒಟ್ಟಾರೆ ಸಾಲದ ಶೇಕಡಾ 24.10 ರಷ್ಟು ಪರಿಶಿಷ್ಟಜಾತಿ ಮತ್ತು ಪರಿಶಿಷ್ಟಪಂಗಡದ ಸದಸ್ಯರಿಗೆ ಸಾಲ ನೀಡುವುದು ಕಡ್ಡಾಯವಾಗಿರುತ್ತದೆ.

18. ಈ ಯೋಜನೆಯಡಿ ಅನುದಾನದ ಬಿಡುಗಡೆಯು ಕರ್ನಾಟಕ ಆರ್ಥಿಕ ಸಂಹಿತೆಯ ಪರಿಚ್ಛೇದ 161(ಬಿ)(2), ಪರಿಚ್ಛೇದ 101(ಬಿ)(5)(111)ರಡಿಯ ಟಿಪ್ಪಣಿ–2 ಹಾಗೂ ಪರಿಚ್ಛೇದ 101(ಬಿ)(6)(11)ರ ಅವಕಾಶಗಳ ಪಾಲನೆಗೆ ಒಳಪಟ್ಟಿರುತ್ತದೆ.

19. ಸಹಕಾರ ಸಂಘಗಳ ನಿಬಂಧಕರು ಸಂಬಂಧಪಟ್ಟ ಪುನರ್ಭರಣ ಬಿಲ್ಲುಗಳು ಪರಿಶೀಲನೆ ಆದ ನಂತರ ದೃಢೀಕೃತ ಬಿಲ್ಲುಗಳ ಆಧಾರದ ಮೇಲೆ ಸಂಬಂಧಪಟ್ಟ ಸಂಸ್ಥೆಗಳಿಗೆ ಹಣವನ್ನು ಬಿಡುಗಡೆ ಮಾಡತಕ್ಕದ್ದು ಹಾಗೂ ಹಣದ ಉಪಯೋಗದ ಬಗ್ಗೆ ಕಾಲಕಾಲಕ್ಕೆ ಪ್ರಗತಿ ವರದಿಗಳನ್ನು ಸಲ್ಲಿಸತಕ್ಕದ್ದು ಮತ್ತು ನಿಗದಿತ ನಮೂನೆಯಲ್ಲಿ ಉಪಯೋಗ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

20. ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅಗತ್ಯವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ಹೊಸದಾಗಿ ಘೋಷಿಸಿರುವ ಪಾಲಿಹೌಸ್ ಸಾಲಗಳು ಹಾಗೂ ಸೋಲಾರ್ ಪಂಪ್‌ಸೆಟ್ ಸಾಲಗಳ ಮಂಜೂರಾತಿ ವಿತರಣೆ ಮತ್ತು ಕ್ಲೈಂಗಳ ಕುರಿತು ಅಗತ್ಯವಾದ ಮಾರ್ಗದರ್ಶನ ಮತ್ತು ಸೂಚನೆಗಳನ್ನು ನೀಡಲು ಸಕ್ಷಮರಾಗಿರತಕ್ಕದ್ದು.

21. ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕಾಲಕಾಲಕ್ಕೆ ಸರ್ಕಾರ ಮತ್ತು ಸಹಕಾರ ಸಂಘಗಳ ನಿಬಂಧಕರು ನೀಡಿದ ಸೂಚನೆಗಳನ್ನು ಸಹಕಾರ ಸಂಸ್ಥೆಗಳು ಪಾಲಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ:ಪಿಡಿ 08 ಎಫ್‌ಆರ್‌ಓ 2016, ದಿನಾಂಕ:10.05.2016 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 101 ವೆಚ್ಚ–2/2016, ದಿನಾಂಕ:13.05.2016ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

**PR. 385**

**SC-100**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ರಾಧಾಕೃಷ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಹಕಾರ ಇಲಾಖೆ

## FOREST, ECOLOGY AND ENVIRONMENT SECRETARIAT

**Sub:** Allotment of 1.2 ha. land for construction of office complex to accommodate all the three Regional Offices of Ministry of Environment and Forests, FSI & NTCA at Doresanipalya RF, JP Nagar, Bengaluru.

**Read:**
1) Addl Principal Chief Conservator of Forests (Central), Regional Office, (Southern Zone), Ministry of Environment and Forests, E & F Wing, Bengaluru Letter No. 6(10)/29-Admn/5559) dt. 08-07-2014.
2) D.O.Letter No.6-2/2015-ROHQ, dated: 13th Feb. 2015 from Additional Director General of Forests, Government of India, Ministry of Environment, Forests and Climate Change, New Delhi.
3) Addl. Principal Chief Conservator of Forests (Central), Regional Office, (Southern Zone), Ministry of Environment and Forests, E & F Wing, Bengaluru Letter No. 6(10)/29-Admn / 7196, dt.24-06- 2015.
4) Government of Karnataka Letter No. FEE 140 FLL 2014, dt: 22-12-2015.
5) Principal Chief Conservator of Forests (Head of Forest Force), Bengaluru Letter No. A5(4).GFL.CR.16/2014-15, dt. 09-02-2016.
6) No. FEE 166 FGL 97, dated: 08-09-1999.

**Preamble:**

The Addl. Principal Chief Conservator of Forests(Central), Regional Office(Southern Zone), Ministry of Environment and Forests vide letter, dated: 08-07- 2014 and D.O.letter dated13-02-2015 read at (1) and (2) above has sought to allot and transfer 2 ha. of forest land to Ministry of Environment and Forests for the purpose of construction of an office complex, in Doresanipalya RF near EMPRI adjacent to the existing Mom & Me Commercial complex.

Subsequently, the Addl.Principal Chief Conservator of Forests(Central), Regional Office(Southern Zone), Ministry of Environment and Forests vide letter dated: 24-06-2015 read at (3) above has sought to allot and transfer at least 1 ha. of forest land to Ministry of Environment and Forests for the purpose of construction of an office complex, in Doresanipalya RF near EMPRI adjacent to the existing Mom & Me commercial complex.

In vide letter dated: 22.12.2015 read at 4 above, Government had requested The Principal Chief Conservator of Forests(HoFF) to send the proposal to the Government for seeking prior permission of the Government of India under Section 2 of the Forest (Conservation) Act, 1980 for diversion of 2 hectares of forest land for allotment as aforesaid.

The Principal Chief Conservator of Forests vide letter dated:09-02-2016 read at (5) above, has reported that :-

-2.;The proposed activity of providing office space comes under category of exemption granted under the Act, and transfer of forest land to Ministry of Environment and Forests does not require clearance of Forest (Conservation) Act, 1980. they have also mentioned that earlier 1 acre of forest land was allotted directly for construction of residential quarters for staff of Ministry of Environment and Forests by Government letter dated: 08-09-1999. Thus requested the present allotment to be made in similar manner, since office infrastructure is related ancillary to conservation, development and management of Forests and Wildlife.

The proposed land for. granting construction office complex was inspected by senior officers on 02-12-2015 and found that the land sought by MoEF, is towards northern portion of Doresanipalya RF, which is near land sought by KAMPA.

This land is not thickly wooded area but has vegetation of bamboo plantation. The extent of land is restricted to 1.2 ha. (and not 2 ha.) which is adjacent to Strides (Pharmaceutical Research Company, and is suitable to take up construction of regional offices of Ministry of Environment and Forests.

The PCCF has requested the Government to consider this issue and allot 1.2 ha. forest land for construction of office complex to accommodate all three Regional Officers of Ministry of Environment and Forests, FSi & NTCA at Doresanipalya RF as the officers CCF(Central) are establishment of Government of India, directly engaged in conservation and Management of Forests.

Earlier, Government of Karnataka vide order No. FEE 166 FGL 97, dated: 08-09-1999 read at (6) above had accorded sanction to allot 1 acre of Forest land in Doresanipalya, Jalari RF, Bengaluru in favour of the Regional Chief Conservator of Forests(Central), Govt. of India for construction of Residential Quarters for the staff of is office subject to certain conditions.

The proposal has been examined in detail and hence the order.

**GOVERNMENT ORDER NO. FEE 140 FLL 2014, BENGALURU, DATED 19.05.2016.**

In the circumstances as explained in the preamble above, Government are pleased to accord approval u/s 2 of Forest (Conservation) Act, 1980 to allot 1.2 ha. of forest land for construction of office complex to accommodate all the three Regional Officers of Ministry of Environment and Forests, FSI & NTCA at Doresanipalya RF, subject to following conditions.

1) The legal status of forest and shall remain unchanged and it win continue to be as forest land.
2) The allotment of land shall tenure of 20 years. However no lease rent shall be payable by the lessees.
3) The leased lands shall be user for construction of office complex to accommodate all the three Regional Officers of Ministry of Environment and Forests, FSI & NTCA
4) The leased shall revert to the Forest Department of Government of Karnataka, when it is no more required for the purpose for which it is leased.
5) Any other conditions that the Government of Karnataka or the Principal Chief Conservator of Forests(Head of Forest Force), Karnataka may impose from time to time, in the interest of Conservation of Forests and public interest.

**PR. 386**

**SC. 100**

By Order and in the name of the Governor of Karnataka,

**L. SHARADA,**

Under Secretary to Govt.,

Forest, Ecology and Environment Department.

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಯೋಜನಾ ಸಚಿವಾಲಯದ ವ್ಯಾಪ್ತಿಯಲ್ಲಿ ಬರುವ ಕರಾವಳಿ ಅಭಿವೃದ್ಧಿ ಪ್ರಾಧಿಕಾರ, ಮಂಗಳೂರು, ಇದರ ಕೇಂದ್ರ ಕಛೇರಿಯಲ್ಲಿ ಮುಖ್ಯ ಜಾಗೃತ ಅಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯು 2016, ದಿನಾಂಕ: 14.03.2016
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 88 ಸೇಲೋಯು 2016, ದಿನಾಂಕ: 22.06.2016

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 14.03.2016ರ ಆದೇಶದನ್ವಯ ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 22.06.2016ರ ಆದೇಶದಲ್ಲಿ, ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿನಾಂಕ: 14.03.2016ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ಸದರಿ ಆದೇಶದ ಭಾಗದ ಕಂಡಿಕೆ 1(2)ರಲ್ಲಿ ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳು ವಿಭಾಗ ಮತ್ತು ಜಿಲ್ಲಾ ಮಟ್ಟದಲ್ಲಿ ಕಛೇರಿಗಳನ್ನು

ಹೊಂದಿದ್ದು, ಸದರಿ ಕಛೇರಿಗಳಲ್ಲಿ ಗಣನೀಯ ಸಿಬ್ಬಂದಿ (Reasonable Strength) ಇದ್ದಲ್ಲಿ, ಆ ವಿಭಾಗ/ಜಿಲ್ಲಾ ಮಟ್ಟದ ಕಛೇರಿಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದೆಂದೂ ಹಾಗೂ ಸದರಿ ವಿಭಾಗ/ಜಿಲ್ಲಾ ಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer Next in Seniority) ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿದೆ.

ಅದರಂತೆ, ಪರಿಶೀಲಿಸಿ, ಕರಾವಳಿ ಅಭಿವೃದ್ಧಿ ಪ್ರಾಧಿಕಾರ, ಮಂಗಳೂರು, ಇದರ ಕೇಂದ್ರ ಕಛೇರಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 60(3) ಯೋಪರ 2016, ಬೆಂಗಳೂರು, ದಿನಾಂಕ : 14–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಕರಾವಳಿ ಅಭಿವೃದ್ಧಿ ಪ್ರಾಧಿಕಾರ, ಮಂಗಳೂರು, ಇವರನ್ನು ಕರಾವಳಿ ಅಭಿವೃದ್ಧಿ ಪ್ರಾಧಿಕಾರ, ಮಂಗಳೂರು, ಇದರ ಕೇಂದ್ರ ಕಛೇರಿಗೆ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ,

**P.R. 520**

**ರಫೀ ಅಹಮದ್ ಎಂ.ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ– 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಯೋಜನಾ ಸಚಿವಾಲಯದ ವ್ಯಾಪ್ತಿಯಲ್ಲಿ ಬರುವ ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗ, ಇದರ ಕೇಂದ್ರ ಕಛೇರಿಯಲ್ಲಿ ಮುಖ್ಯ ಜಾಗೃತ ಅಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯು 2016, ದಿನಾಂಕ: 14.03.2016.
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 88 ಸೇಲೋಯು 2016, ದಿನಾಂಕ: 22.06.2016.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 14.03.2016ರ ಆದೇಶದನ್ವಯ ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 22.06.2016ರ ಆದೇಶದಲ್ಲಿ, ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿನಾಂಕ: 14.03.2016ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ಸದರಿ ಆದೇಶದ ಭಾಗದ ಕಂಡಿಕೆ 1(2)ರಲ್ಲಿ ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳು ವಿಭಾಗ ಮತ್ತು ಜಿಲ್ಲಾ ಮಟ್ಟದಲ್ಲಿ ಕಛೇರಿಗಳನ್ನು ಹೊಂದಿದ್ದು, ಸದರಿ ಕಛೇರಿಗಳಲ್ಲಿ ಗಣನೀಯ ಸಿಬ್ಬಂದಿ (Reasonable Strength) ಇದ್ದಲ್ಲಿ, ಆ ವಿಭಾಗ/ಜಿಲ್ಲಾ ಮಟ್ಟದ ಕಛೇರಿಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದೆಂದೂ ಹಾಗೂ ಸದರಿ ವಿಭಾಗ/ಜಿಲ್ಲಾ ಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer Next in Seniority) ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿದೆ.

ಅದರಂತೆ, ಪರಿಶೀಲಿಸಿ, ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗ, ಇದರ ಕೇಂದ್ರ ಕಛೇರಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 60(2) ಯೋಪರ 2016, ಬೆಂಗಳೂರು, ದಿನಾಂಕ : 14–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಉಪ ಹಣಕಾಸು ನಿಯಂತ್ರಣಾಧಿಕಾರಿ, ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗ, ಇವರನ್ನು ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗ, ಇದರ ಕೇಂದ್ರ ಕಛೇರಿಗೆ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ,

**P.R. 521**

**ರಫೀ ಅಹಮದ್ ಎಂ.ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ– 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಯೋಜನಾ ಸಚಿವಾಲಯದ ವ್ಯಾಪ್ತಿಯಲ್ಲಿ ಬರುವ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ, ಇದರ ಕೇಂದ್ರ ಕಛೇರಿಯಲ್ಲಿ ಮುಖ್ಯ ಜಾಗೃತ ಅಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯು 2016, ದಿನಾಂಕ: 14.03.2016.
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 88 ಸೇಲೋಯು 2016, ದಿನಾಂಕ: 22.06.2016.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 14.03.2016ರ ಆದೇಶದನ್ವಯ ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 22.06.2016ರ ಆದೇಶದಲ್ಲಿ, ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿನಾಂಕ: 14.03.2016ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ಸದರಿ ಆದೇಶದ ಭಾಗದ ಕಂಡಿಕೆ 1(2)ರಲ್ಲಿ ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳು ವಿಭಾಗ ಮತ್ತು ಜಿಲ್ಲಾ ಮಟ್ಟದಲ್ಲಿ ಕಛೇರಿಗಳನ್ನು ಹೊಂದಿದ್ದು, ಸದರಿ ಕಛೇರಿಗಳಲ್ಲಿ ಗಣನೀಯ ಸಿಬ್ಬಂದಿ (Reasonable Strength) ಇದ್ದಲ್ಲಿ, ಆ ವಿಭಾಗ/ಜಿಲ್ಲಾ ಮಟ್ಟದ ಕಛೇರಿಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದೆಂದೂ ಹಾಗೂ ಸದರಿ ವಿಭಾಗ/ಜಿಲ್ಲಾ ಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer Next in Seniority) ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿದೆ.

ಅದರಂತೆ, ಪರಿಶೀಲಿಸಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ, ಇದರ ಕೇಂದ್ರ ಕಛೇರಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 60(1) ಯೋಪರ 2016, ಬೆಂಗಳೂರು, ದಿನಾಂಕ : 14–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಉಪ ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ, ಇವರನ್ನು ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ, ಇದರ ಕೇಂದ್ರ ಕಛೇರಿಗೆ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

**P.R. 522**

ಕರ್ನಾಟಕ ರಾಜ್ಯಪಾಲರ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ,
**ರಫೀ ಅಹಮದ್ ಎಂ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ– 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಹೆಚ್.ಆರ್.ಎಂ.ಎಸ್. 2.0 ಯೋಜನೆಯ ತಂತ್ರಾಂಶದ ಪರಿವಿಡಿಗಳನ್ನು ಪರಿಶೀಲಿಸಲು ಬಳಕೆದಾರ ಅಂಗೀಕಾರ ಶೋಧನಾ ಸಮಿತಿ ಹಾಗೂ ಬಾಹ್ಯ ಬಳಕೆದಾರರೊಂದಿಗಿನ ಸಮೀಕರಣ ಪರಿಶೀಲನಾ ಸಮಿತಿ ಮತ್ತು ಇತರೆ ಉಪಸಮಿತಿಗಳನ್ನು ರಚಿಸುವ ಕುರಿತು.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 21 ಇಜಿಎಂ 2014, ದಿನಾಂಕ: 04.09.2014 ಹಾಗೂ 27.04.2015.
2) ದಿನಾಂಕ: 14.06.2016 ರಂದು ನಡೆದ ಯೋಜನಾ ಅನುಷ್ಠಾನ ಸಮಿತಿ ಹೆಚ್.ಆರ್.ಎಂ.ಎಸ್. 2.0 ಯೋಜನೆ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ: 04.09.2014 ರ ಆದೇಶದಲ್ಲಿ ಪ್ರಸ್ತುತ ಚಾಲನೆಯಲ್ಲಿರುವ ಹೆಚ್.ಆರ್.ಎಂ.ಎಸ್. ಯೋಜನೆಯನ್ನು ಹೆಚ್.ಆರ್.ಎಂ.ಎಸ್. 2.0 ಯೋಜನೆಗೆ ಉನ್ನತೀಕರಿಸಿ ಜಾರಿಗೊಳಿಸಲು ಹಾಗೂ ಈ ಉನ್ನತೀಕರಣ ಯೋಜನೆಯನ್ನು ಅಭಿವೃದ್ಧಿಗೊಳಿಸುವ ಕಾರ್ಯವನ್ನು ಮೆ: ಸಿಎಂಸಿ ಲಿಮಿಟೆಡ್ (ಈಗಿನ ಮೆ: ಟಿಸಿಎಸ್ ಲಿಮಿಟೆಡ್) ಇವರಿಗೆ ವಹಿಸಲು ಸರ್ಕಾರವು ಮಂಜೂರಾತಿ ನೀಡಿತ್ತು. ಮೇಲೆ (1) ರಲ್ಲಿ ಓದಲಾದ ದಿನಾಂಕ: 27.04.2015 ರ ಆದೇಶದಲ್ಲಿ ಸರ್ಕಾರವು ಹೆಚ್.ಆರ್.ಎಂ.ಎಸ್. 2.0 ಯೋಜನೆಯನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸುವ ಸಲುವಾಗಿ ಯೋಜನಾ ಅನುಷ್ಠಾನ ಸಮಿತಿಯೊಂದನ್ನು ಹಾಗೂ ಸಂಬಂಧಿತ ಇಲಾಖೆಗಳು ಹೊರಡಿಸಿರುವ ನಿಯಮ/ಆದೇಶ ಇತ್ಯಾದಿಗಳನ್ನು ಸಂಗ್ರಹಿಸಿ, ಕ್ರೋಡೀಕರಿಸಿ ಒದಗಿಸಲು 9 ಉಪಸಮಿತಿಗಳನ್ನು ರಚಿಸಿತ್ತು.

ಹೆಚ್.ಆರ್.ಎಂ.ಎಸ್. 2.0 ಯೋಜನೆಯ ವ್ಯವಸ್ಥೆಯ ನವೀಕರಣಕ್ಕೆ ನೇಮಕಗೊಂಡಿರುವ ಟಿಸಿಎಸ್ ಸಂಸ್ಥೆ (System Integrator) ತಂತ್ರಾಂಶ ಅವಶ್ಯಕತೆ ವಿವರಣೆ (Software Requirement specification (SRS) ದಸ್ತಾವೇಜು (Document) ಗಳನ್ನು ತಯಾರಿಸಿದ್ದು, ಇದನ್ನು ಕೂಲಂಕುಶವಾಗಿ ಪರಿಶೀಲಿಸಿ ಅಗತ್ಯವಿರುವ ಬದಲಾವಣೆ/ಸುಧಾರಣೆಗಳ ಕುರಿತು ಶಿಫಾರಸ್ಸುಗಳನ್ನು ನೀಡುವಂತೆ ಯೋಜನಾ ಅನುಷ್ಠಾನ ಸಮಿತಿ ಸದಸ್ಯರನ್ನು ಹಾಗೂ ಉಪಸಮಿತಿಗಳ ಪೀಠಸ್ಥರುಗಳನ್ನು ಕೋರಲಾಗಿತ್ತು. ಈ ದಸ್ತಾವೇಜಿನಲ್ಲಿರುವ ಅಂಶಗಳನ್ನು ವಿವರವಾಗಿ ಪರಿಶೀಲಿಸಿ ಅವುಗಳಲ್ಲಿರುವ ಬದಲಾವಣೆಗಳ ಕುರಿತು ಸೂಕ್ತ ಶಿಫಾರಸ್ಸುಗಳನ್ನು ಸಮಿತಿಯ ಸದಸ್ಯರುಗಳು ನೀಡಿದ್ದಾರೆ. ಅನಂತರ ಸರ್ಕಾರವು ರಚಿಸಿದ್ದ ಉಪಸಮಿತಿಗಳು ವ್ಯವಹಾರ ನಿಯಮ/ಆದೇಶ ಇತ್ಯಾದಿಗಳನ್ನು ಒದಗಿಸಿ ಬದಲಾವಣೆಗಳು ಅಗತ್ಯವಿದೆ ಎಂದು ಪರಿಗಣಿತವಾದ ಅಂಶಗಳ ಬಗ್ಗೆ ತಮ್ಮ ಶಿಫಾರಸ್ಸನ್ನು ನೀಡಿವೆ. ಇದನ್ನು ಅನುಸರಿಸಿ ದಸ್ತಾವೇಜಿನಲ್ಲಿ ಅಗತ್ಯ ಬದಲಾವಣೆಗಳನ್ನು ಮಾಡಿದ್ದು, ಸದರಿ ದಸ್ತಾವೇಜಿಗೆ ಯೋಜನಾ ಅನುಷ್ಠಾನ ಸಮಿತಿಯು ದಿನಾಂಕ: 14.06.2016 ರಂದು ನಡೆದ ಸಭೆಯಲ್ಲಿ ಅನುಮೋದನೆಯನ್ನು ನೀಡಿದೆ.

ಮುಂದುವರೆದು ದಿನಾಂಕ: 14.06.2016 ರಂದು ನಡೆದ ಸಭೆಯಲ್ಲಿ ಯೋಜನಾ ಅನುಷ್ಠಾನ ಸಮಿತಿಯು ಪ್ರಮುಖ ಪಾಲುದಾರ ಇಲಾಖೆಗಳನ್ನೊಳಗೊಂಡ ಬಳಕೆದಾರ ಅಂಗೀಕಾರ ಶೋಧನಾ ಸಮಿತಿ ಹಾಗೂ ಇತರೆ ಬಾಹ್ಯ ಬಳಕೆದಾರರೊಂದಿಗಿನ ಸಮೀಕರಣದ ವಿಷಯವನ್ನು ಪರಿಶೀಲಿಸಲು ಒಂದು ಪ್ರತ್ಯೇಕ ಸಮಿತಿಯನ್ನು ಮತ್ತು ದಸ್ತಾವೇಜನ್ನು ವಿವರವಾಗಿ ಪರಿಶೀಲಿಸಲು ವಿವಿಧ ಇಲಾಖೆಗಳ ಅಧಿಕಾರಿ ಮತ್ತು ಸಿಬ್ಬಂದಿಯನ್ನೊಳಗೊಂಡ ವಿವಿಧ ಉಪಸಮಿತಿಗಳನ್ನು ಅವರ ಕರ್ತವ್ಯ ಮತ್ತು ಜವಾಬ್ದಾರಿಗಳ ಆಧಾರದ ಮೇಲೆ ರಚಿಸಲು ತೀರ್ಮಾನಿಸಿದೆ. ಇದರಂತೆ ಸದರಿ ಸಮಿತಿಗಳನ್ನು ರಚಿಸಲು ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 21 ಇಆಇ 2014, ದಿನಾಂಕ: 05ನೇ ಜುಲೈ 2016**

ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನೆಲೆಯಲ್ಲಿ ಹೆಚ್.ಆರ್.ಎಂ.ಎಸ್. 2.0 ಯೋಜನೆಯ ತಂತ್ರಾಂಶದ ಪರಿವಿಡಿಗಳನ್ನು ಪರಿಶೀಲಿಸಲು ಹಾಗೂ ಯೋಜನೆಯನ್ನು ಸರಾಗವಾಗಿ ಜಾರಿಗೊಳಿಸಲು ಸರ್ಕಾರವು ಈ ಕೆಳಗೆ ನಮೂದಿಸಿರುವ ಸದಸ್ಯರನ್ನೊಳಗೊಂಡ (i) ಬಳಕೆದಾರ ಅಂಗೀಕಾರ ಶೋಧನಾ ಸಮಿತಿ (ii) ಬಾಹ್ಯ ಬಳಕೆದಾರರೊಂದಿಗಿನ ಸಮೀಕರಣ ಪರಿಶೀಲನಾ ಸಮಿತಿ ಹಾಗೂ ಉಪಸಮಿತಿಗಳನ್ನು ರಚಿಸಲು ಮಂಜೂರಾತಿ ನೀಡಿದೆ. ಸಮಿತಿಯ ಪೀಠಸ್ಥರು ಅಗತ್ಯವೆನಿಸಿದಲ್ಲಿ ವ್ಯವಹಾರ ನಿಯಮಗಳ ಬಗ್ಗೆ ಪರಿಣಿತಿ ಹೊಂದಿರುವ ಅಧಿಕಾರಿ/ಸಿಬ್ಬಂದಿಗಳನ್ನು ವಿಶೇಷ ಆಹ್ವಾನಿತರೆಂದು ಪರಿಗಣಿಸಿ ಸಮಿತಿ ಸಭೆಗೆ ಆಹ್ವಾನಿಸಲು ಅನುಮತಿಸಿದೆ.

**ಬಳಕೆದಾರ ಅಂಗೀಕಾರ ಶೋಧನಾ ಸಮಿತಿ**

| | | |
|---|---|---|
| 1 | ಮುಖ್ಯಕಾರ್ಯನಿರ್ವಹಣಾಧಿಕಾರಿ, ಇ–ಆಡಳಿತ ಕೇಂದ್ರ | ಪೀಠಸ್ಥರು |
| **2** | ಪ್ರೊ. ದೇಬಬ್ರತ ದಾಸ್, ಡೀನ್ ಅಕಾಡೆಮಿಕ್ ಮತ್ತು ಡಿ. ಐಐಐಟಿ, ಬೆಂಗಳೂರು. | ಸದಸ್ಯರು |
| 3 | ಪ್ರೊ. ಚಂದ್ರಶೇಖರ್ ರಾಮನಾಥನ್, ಅಸೋಸಿಯೆಟ್ ಡೀನ್ (ಅಕಾಡೆಮಿಕ್ಸ್) ಐಐಐಟಿ, ಬೆಂಗಳೂರು. | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪಕಾರ್ಯದರ್ಶಿಗಳ ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಸೇವೆಗಳ/ಸೇವಾನಿಯಮ/ಆಸು ತರಬೇತಿ ವಿಭಾಗದ ಅಧಿಕಾರಿಗಳು. | ಸದಸ್ಯರು |
| 5 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪಕಾರ್ಯದರ್ಶಿಗಳ ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಸೇವೆಗಳು/ಆರ್ಥಿಕ ನಿಯಮಗಳು ವಿಭಾಗದ ಅಧಿಕಾರಿಗಳು. | ಸದಸ್ಯರು |
| 6 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪಕಾರ್ಯದರ್ಶಿ ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಸೇವೆಗಳು/ಆರ್ಥಿಕ ನಿಯಮಗಳು ವಿಭಾಗದ ಅಧಿಕಾರಿಗಳು. | ಸದಸ್ಯರು (ಮನೆಬಾಡಿಗೆ ಭತ್ಯೆ ಮತ್ತು ನಗರಪರಿಹಾರ ಭತ್ಯೆ ಹಾಗೂ ಇವುಗಳ ಉದ್ದೇಶಕ್ಕೆ ನಗರ/ಪಟ್ಟಣ ಪ್ರದೇಶಗಳ ವಿವಿಧ ಸ್ಥಳಗಳ ವರ್ಗೀಕರಣ ವಿಷಯ ಕುರಿತ ಚರ್ಚೆಯ ದಿನಾಂಕದಂದು ಕರೆ ಬಂದಾಗ ಮಾತ್ರ ಹಾಜರಾಗುವುದು) |
| 7 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪಕಾರ್ಯದರ್ಶಿ ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಅಧಿಕಾರಿಗಳು. | ಸದಸ್ಯರು (ಇಲಾಖೆಗೆ ಸಂಬಂಧಿಸಿದ ಹೆಚ್ಚುವರಿ ವಿಶೇಷ ಭತ್ಯೆ ಇತರೆ ಭತ್ಯೆಗಳು ಕುರಿತ ಚರ್ಚೆಯ ದಿನಾಂಕದಂದು ಕರೆ ಬಂದಾಗ ಮಾತ್ರ ಹಾಜರಾಗುವುದು) |
| 8 | ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪಕಾರ್ಯದರ್ಶಿ ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಅಧಿಕಾರಿಗಳು. | ಸದಸ್ಯರು |
| 9 | ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಡೆಪ್ಯುಟಿ ರಿಜಿಸ್ಟ್ರಾರ್ ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಅಧಿಕಾರಿಗಳು. | ಸದಸ್ಯರು (ಎಫ್ ಎನ್ ಜೆ ಪಿ ಸಿ ವೇತನ ಶ್ರೇಣಿಗಳ ವಿಷಯ ಕುರಿತ ಚರ್ಚೆಯ ದಿನಾಂಕದಂದು ಕರೆ ಬಂದಾಗ ಮಾತ್ರ ಹಾಜರಾಗುವುದು) |
| 10 | ನಿರ್ದೇಶಕರು/ಆಯುಕ್ತರು ಕಾಲೇಜು ಶಿಕ್ಷಣ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪನಿರ್ದೇಶಕರು ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಅಧಿಕಾರಿಗಳು | ಸದಸ್ಯರು (ಯುಜಿಸಿ ವೇತನ ಶ್ರೇಣಿಗಳ ವಿಷಯ ಕುರಿತ ಚರ್ಚೆಯ ದಿನಾಂಕದಂದು ಕರೆ ಬಂದಾಗ ಮಾತ್ರ ಹಾಜರಾಗುವುದು) |

| | | |
|---|---|---|
| 11 | ನಿರ್ದೇಶಕರು ತಾಂತ್ರಿಕ ಶಿಕ್ಷಣ ಇಲಾಖೆ, ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪನಿರ್ದೇಶಕರು ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಅಧಿಕಾರಿಗಳು. | ಸದಸ್ಯರು(ಎಐಸಿಟಿಇ ವೇತನ ಶ್ರೇಣಿಗಳ ವಿಷಯ ಕುರಿತ ಚರ್ಚೆಯ ದಿನಾಂಕದಂದು ಕರೆ ಬಂದಾಗ ಮಾತ್ರ ಹಾಜರಾಗುವುದು) |
| 12 | ಹಿರಿಯ ಲೆಕ್ಕಾಧಿಕಾರಿ ಪ್ರಧಾನ ಮಹಾಲೇಖಪಾಲರ ಕಛೇರಿ (ಜಿ ಮತ್ತು ಎಸ್ ಎಸ್ ಎ) ಕರ್ನಾಟಕ. | ಸದಸ್ಯರು |
| 13 | ಪ್ರಧಾನ ನಿರ್ದೇಶಕರು, ರಾಜ್ಯ ಲೆಕ್ಕಪರಿಶೋಧನಾ ಮತ್ತು ಲೆಕ್ಕಪತ್ರ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪನಿರ್ದೇಶಕರು ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಅಧಿಕಾರಿಗಳು | ಸದಸ್ಯರು |
| 14 | ನಿರ್ದೇಶಕರು, ಖಜಾನೆ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪನಿರ್ದೇಶಕರು ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಅಧಿಕಾರಿಗಳು. | ಸದಸ್ಯರು |
| 15 | ಗ್ರೂಪ್ ಲೀಡರ್, ಟಿಸಿಎಸ್ ಲಿಮಿಟೆಡ್, ಬೆಂಗಳೂರು. | ಸದಸ್ಯರು |
| 16 | ಯೋಜನಾಧಿಕಾರಿಗಳು, ಹೆಚ್.ಆರ್.ಎಂ.ಎಸ್, ಇ–ಆಡಳಿತ ಕೇಂದ್ರ. | ಸಂಚಾಲಕರು |

**ಕರ್ತವ್ಯ ಮತ್ತು ಜವಾಬ್ದಾರಿಗಳು**

1. ಸಿಸ್ಟಂ ಇಂಟಿಗ್ರೇಟರ್ ಟಿಸಿಎಸ್ ಲಿಮಿಟೆಡ್ ಇವರು ತಯಾರಿಸಿರುವಂತೆ ಹಾಗೂ ಯೋಜನಾ ಅನುಷ್ಠಾನ ಸಮಿತಿಯಲ್ಲಿ ಅನುಮೋದನೆಯಾದಂತೆ ಅಳವಡಿಸಿರುವುದನ್ನು ಖಾತ್ರಿ ಪಡಿಸಿಕೊಳ್ಳುವುದು.
2. ಈಗಾಗಲೇ ಅನುಮೋದಿಸಲ್ಪಟ್ಟ ಎಸ್.ಆರ್.ಎಸ್. ನಲ್ಲಿ ಅಳವಡಿಸಿರುವ ಮಾಹಿತಿಯು ನಿಯಮಗಳಿಗನುಸಾರವಾಗಿದೆ ಎಂಬುದನ್ನು ಪರೀಕ್ಷಿಸುವುದು ಮತ್ತು ಅಗತ್ಯವಿರುವ ಬದಲಾವಣೆಗಳನ್ನು ಯೋಜನಾ ಅನುಷ್ಠಾನ ಸಮಿತಿಯ ಗಮನಕ್ಕೆ ತರುವುದು.
3. ಈಗಾಗಲೇ ಅಳವಡಿಸಿರುವ ಮಾಹಿತಿಯಲ್ಲಿ ಯಾವುದಾದರೂ ಕೊರತೆ ಇದ್ದಲ್ಲಿ ಅದನ್ನು ಪರಿಹರಿಸಲು ಸೂಕ್ತ ದಾಖಲೆಗಳನ್ನು ಪಡೆದು ಅವನ್ನು ಸರಿಪಡಿಸಲು ಯೋಜನಾ ಅನುಷ್ಠಾನ ಸಮಿತಿಗೆ ಶಿಫಾರಸ್ಸು ಮಾಡುವುದು.
4. ಅಳವಡಿಸಿರುವ ದಾಖಲೆಯು ಬಳಕೆದಾರ ಸ್ನೇಹಿಯೇ ಎಂಬುದನ್ನು ಪರಿಶೀಲಿಸಿ ಅಗತ್ಯವಿದ್ದಲ್ಲಿ ಸೂಕ್ತ ಬದಲಾವಣೆಗಳನ್ನು ತರುವಂತೆ ಯೋಜನಾ ಅನುಷ್ಠಾನ ಸಮಿತಿಯನ್ನು ಕೋರುವುದು.

**ಬಾಹ್ಯ ಬಳಕೆದಾರರೊಂದಿಗಿನ ಸಮೀಕರಣ ಪರಿಶೀಲನಾ ಸಮಿತಿ**

| | | |
|---|---|---|
| 1 | ಮುಖ್ಯ ಕಾರ್ಯನಿರ್ವಹಣಾಧಿಕಾರಿ ಇ–ಆಡಳಿತ ಕೇಂದ್ರ | ಪೀಠಸ್ಥರು |
| 2 | ಆಯುಕ್ತರು ಮತ್ತು ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಖಜಾನೆ–2 ಆರ್ಥಿಕ ಇಲಾಖೆ. | ಸದಸ್ಯರು |
| 3 | ಪ್ರೊ. ಚಂದ್ರಶೇಖರ್ ರಾಮನಾಥನ್, ಅಸೋಸಿಯೆಟ್ ಡೀನ್ (ಅಕಾಡೆಮಿಕ್ಸ್) ಐಐಐಟಿ, ಬೆಂಗಳೂರು. | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪಕಾರ್ಯದರ್ಶಿಗಳ ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಸೇವೆಗಳು/ಸೇವಾನಿಯಮ/ಆಸು ತರಬೇತಿ ವಿಭಾಗದ ಅಧಿಕಾರಿಗಳು. | ಸದಸ್ಯರು |
| 5 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪಕಾರ್ಯದರ್ಶಿಗಳ ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಸೇವೆಗಳು/ಆರ್ಥಿಕ ನಿಯಮಗಳು ವಿಭಾಗದ ಅಧಿಕಾರಿಗಳು. | ಸದಸ್ಯರು |
| 6 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪಕಾರ್ಯದರ್ಶಿಗಳ ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಅಧಿಕಾರಿಗಳು. | ಸದಸ್ಯರು |
| 7 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪಕಾರ್ಯದರ್ಶಿ ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಸೇವೆಗಳು/ಆರ್ಥಿಕ ನಿಯಮಗಳು ವಿಭಾಗದ ಅಧಿಕಾರಿಗಳು. | ಸದಸ್ಯರು |
| 8 | ಪ್ರಧಾನ ನಿರ್ದೇಶಕರು ಕರ್ನಾಟಕ ರಾಜ್ಯ ಆಡಿಟ್ ಮತ್ತು ಲೆಕ್ಕಪತ್ರ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪನಿರ್ದೇಶಕರು ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಅಧಿಕಾರಿಗಳು ಇಲಾಖೆ. | ಸದಸ್ಯರು |
| 9 | ನಿರ್ದೇಶಕರು ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪನಿರ್ದೇಶಕರು ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಅಧಿಕಾರಿಗಳು. | ಸದಸ್ಯರು |
| 10 | ನಿರ್ದೇಶಕರು ಖಜಾನೆ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪನಿರ್ದೇಶಕರು ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಅಧಿಕಾರಿಗಳು. | ಸದಸ್ಯರು |

| | | |
|---|---|---|
| 11 | ಹಿರಿಯ ಲೆಕ್ಕಾಧಿಕಾರಿ, ಮಹಾಲೇಖಪಾಲರು ಕಛೇರಿ. | ಸದಸ್ಯರು |
| 12 | ಗ್ರೂಪ್ ಲೀಡರ್, ಟಿಸಿಎಸ್ ಲಿಮಿಟೆಡ್, ಬೆಂಗಳೂರು. | ಸದಸ್ಯರು |
| 13 | ಯೋಜನಾಧಿಕಾರಿಗಳು, ಹೆಚ್.ಆರ್.ಎಂ.ಎಸ್. ಇ–ಆಡಳಿತ ಕೇಂದ್ರ. | ಸಂಚಾಲಕರು |

**ಕರ್ತವ್ಯ ಮತ್ತು ಜವಾಬ್ದಾರಿ**

1. ಹೆಚ್.ಆರ್.ಎಂ.ಎಸ್. 2.0 ಬಾಹ್ಯ ಬಳಕೆದಾರರ ಅಪ್ಲಿಕೇಷನ್‌ನೊಂದಿಗೆ ಸಮೀಕರಣಗೊಳಿಸುವಿಕೆಯಲ್ಲಿ ಉದ್ಭವಿಸುವ ಸಮಸ್ಯೆಗಳನ್ನು ಅಧ್ಯಯನ ಮಾಡಿ ಅವುಗಳಿಗೆ ಸೂಕ್ತ ರೀತಿಯ ಪರಿಹಾರವನ್ನು ಸೂಚಿಸಿ ಈ ಸಮೀಕರಣವು ಸುಗಮವಾಗುವಂತೆ ನೋಡಿಕೊಳ್ಳುವುದು.
2. ಇತರೆ ಬಾಹ್ಯ ಬಳಕೆದಾರರಿಗೆ ನೀಡಲಾಗುವ ಇಂಟರ್ ಫೇಸ್‌ನ ಮೂಲಕ ಖಜಾನೆ–2 ಮತ್ತು ಹೆಚ್.ಆರ್.ಎಂ.ಎಸ್. 2.0 ಮಾಹಿತಿಯನ್ನು ಯಾವ ರೀತಿ ಒದಗಿಸಬೇಕೆಂಬ ತಿಳುವಳಿಕೆ ನೀಡಲು ರೂಪುರೇಶ್‌ಗಳನ್ನು ತಯಾರಿಸುವುದು.

**ಇಲಾಖಾ ಉಪಸಮಿತಿಗಳು**

| | | |
|---|---|---|
| 1 | ಮುಖ್ಯಕಾರ್ಯನಿರ್ವಹಣಾಧಿಕಾರಿ ಇ–ಆಡಳಿತ ಕೇಂದ್ರ. | ಪೀಠಸ್ಥರು |
| 2 | ಪ್ರೊ. ಚಂದ್ರಶೇಖರ್ ರಾಮನಾಥನ್, ಅಸೋಸಿಯೆಟ್ ಡೀನ್ (ಅಕಾಡೆಮಿಕ್ಸ್) ಐಐಐಟಿ, ಬೆಂಗಳೂರು. | ಸದಸ್ಯರು |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪಕಾರ್ಯದರ್ಶಿಗಳ ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಸೇವೆಗಳು/ಸೇವಾನಿಯಮ/ಆಸು ತರಬೇತಿ ವಿಭಾಗದ ಅಧಿಕಾರಿಗಳು. | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪಕಾರ್ಯದರ್ಶಿಗಳ ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಸೇವೆಗಳು/ಆರ್ಥಿಕ ನಿಯಮಗಳು ವಿಭಾಗದ ಅಧಿಕಾರಿಗಳು. | ಸದಸ್ಯರು |
| 5 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪಕಾರ್ಯದರ್ಶಿಗಳ ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಅಧಿಕಾರಿಗಳು. | ಸದಸ್ಯರು |
| 6 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪಕಾರ್ಯದರ್ಶಿ ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಸೇವೆಗಳು/ಆರ್ಥಿಕ ನಿಯಮಗಳು ವಿಭಾಗದ ಅಧಿಕಾರಿಗಳು. | ಸದಸ್ಯರು |
| 7 | ನಿರ್ದೇಶಕರು ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪನಿರ್ದೇಶಕರು ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಅಧಿಕಾರಿಗಳು. | ಸದಸ್ಯರು |
| 8 | ನಿರ್ದೇಶಕರು ಖಜಾನೆ ಇಲಾಖೆ ಇವರಿಂದ ನಾಮ ನಿರ್ದೇಶಿಸಲ್ಪಟ್ಟ ಉಪನಿರ್ದೇಶಕರು ಮತ್ತು ಅದಕ್ಕಿಂತ ಹೆಚ್ಚಿನ ಮಟ್ಟದ ಅಧಿಕಾರಿಗಳು. | ಸದಸ್ಯರು |
| 9 | ಹಿರಿಯ ಲೆಕ್ಕಾಧಿಕಾರಿ, ಮಹಾಲೇಖಪಾಲರು ಕಛೇರಿ. | ಸದಸ್ಯರು |
| 10 | ವಿವಿಧ ಇಲಾಖೆಗಳ ಅಧಿಕಾರಿಗಳು ಮತ್ತು ಸಿಬ್ಬಂದಿ. | ಇಲಾಖೆಗಳ ಪ್ರತಿನಿಧಿಗಳನ್ನು (ಲಗತ್ತಿಸಿರುವ ಅನುಬಂಧದಂತೆ) ಪ್ರತ್ಯೇಕವಾಗಿ ದಿನಾಂಕ–ಗಳನ್ನು ನಿರ್ಧರಿಸಿ ಸಮಿತಿ ಸಭೆಗೆ ಆಹ್ವಾನಿಸಲಾಗುವುದು |
| 11 | ಗ್ರೂಪ್ ಲೀಡರ್, ಟಿಸಿಎಸ್ ಲಿಮಿಟೆಡ್. | ಸದಸ್ಯರು |
| 12 | ಯೋಜನಾಧಿಕಾರಿಗಳು, ಹೆಚ್.ಆರ್.ಎಂ.ಎಸ್. ಇ–ಆಡಳಿತ ಕೇಂದ್ರ. | ಸಂಚಾಲಕರು |

**ಕರ್ತವ್ಯ ಮತ್ತು ಜವಾಬ್ದಾರಿ**

1. ಹೆಚ್.ಆರ್.ಎಂ.ಎಸ್. 2.0 ಯೋಜನೆಯನ್ನು ಕಾರ್ಯಗತಗೊಳಿಸಲು ರೂಪಿಸಲಾಗಿರುವ ಹಾಗೂ ಬಳಕೆದಾರ ಅಂಗೀಕಾರ ಸಮಿತಿ ಪರಿಶೀಲಿಸಿರುವ ಹಾಗೂ ಬದಲಾವಣೆ ಕುರಿತು ಸಲಹೆ ಮಾಡಿರುವ ಎಸ್.ಆರ್.ಎಸ್. ಮತ್ತು ಇತರೆ ದಾಖಲೆಗಳಲ್ಲಿ ಯಾವುದಾದರೂ ತಿದ್ದುಪಡಿ ಅಗತ್ಯವಿದ್ದಲ್ಲಿ ಅದರ ಬಗ್ಗೆ ಸೂಕ್ತ ಸಲಹೆಗಳನ್ನು ನಿಯಮ/ಆದೇಶಗಳ ಆಧಾರದ ಮೇಲೆ ನೀಡುವುದು.
2. ವಿವಿಧ ಇಲಾಖೆಗಳ ಅಧಿಕಾರಿ ಮತ್ತು ನೌಕರರು ನಿಗಧಿಗೊಳಿಸಿದ ದಿನಾಂಕದಂದು ಉಪಸಮಿತಿ ಸಭೆಗೆ ಹಾಜರಾಗಿ ಅವರ ಪಾತ್ರ ಮತ್ತು ಜವಾಬ್ದಾರಿಗಳ ಆಧಾರದ ಮೇಲೆ ವಿವರವಾದ ಟೆಸ್ಟಿಂಗ್ ಕೈಗೊಂಡು ಮಾರ್ಪಾಟುಗಳ ಕುರಿತು ಸಲಹೆಗಳನ್ನು ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ,

**ಎ.ವಿ. ಶೈಲಜ,**

ಪೀಠಾಧಿಕಾರಿ–1,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಇ–ಆಡಳಿತ)

ಆದೇಶ ಸಂಖ್ಯೆ: ಸಿಆಸುಇ 21 ಇಆಇ 2014, ದಿನಾಂಕ: 05.07.2016.

| ಕ್ರ.ಸಂ. | ಇಲಾಖೆ | ಉಪಸಮಿತಿ ಸಭೆಯಲ್ಲಿ ಭಾಗವಹಿಸಬೇಕಾದ ದಿನಾಂಕ | ಹಾಜರಾಗಬೇಕಾದ ಸಿಬ್ಬಂದಿ |
|---|---|---|---|
| 1 | ಪೊಲೀಸ್ | | ಇಲಾಖೆಯ ವ್ಯವಹಾರ ನಿಯಮಗಳ ಸಂಪೂರ್ಣ ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 2 | ಕರ್ನಾಟಕ ಉಚ್ಚನ್ಯಾಯಾಲಯ | | ಎಫ್ ಎನ್ ಜಿ ಪಿ ಸಿ ವೇತನ ಶ್ರೇಣಿ ಆಯವ್ಯಯ ಮತ್ತು ವ್ಯವಹಾರ ನಿಯಮಗಳು ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 3 | ಕಾಲೇಜು ಶಿಕ್ಷಣ | | ಎಐಸಿಟಿ ವೇತನ ಶ್ರೇಣಿ ಆಯವ್ಯಯ ಮತ್ತು ವ್ಯವಹಾರ ನಿಯಮಗಳು ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 4 | ತಾಂತ್ರಿಕ ಶಿಕ್ಷಣ | | ಎಐಸಿಟಿ ವೇತನ ಶ್ರೇಣಿ ಆಯವ್ಯಯ ಮತ್ತು ವ್ಯವಹಾರ ನಿಯಮಗಳು ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 5 | ಅರಣ್ಯ | | ವೇತನ ಮತ್ತು ಭತ್ಯೆ ಸೇರಿದಂತೆ ವ್ಯವಹಾರ ನಿಯಮಗಳ ಹಾಗೂ ವಸತಿ ಗೃಹಗಳ ಹಂಚಿಕೆ ಕುರಿತು ಸಂಪೂರ್ಣ ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 6 | ಪಶುಪಾಲನೆ ಮತ್ತು ಪಶುವೈದ್ಯಕೀಯ ಸೇವೆಗಳು | | ವೇತನ ಮತ್ತು ಭತ್ಯೆ ಸೇರಿದಂತೆ ವ್ಯವಹಾರ ನಿಯಮಗಳ ಹಂಚಿಕೆ ಕುರಿತು ಸಂಪೂರ್ಣ ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 7 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ | | ಇಲಾಖೆ ವೈದ್ಯರುಗಳಿಗೆ ಲಭ್ಯವಿರುವ ವಿವಿಧ ಭತ್ಯೆಗಳು ಮತ್ತು ವೇತನ ಬಗೆಗಿನ ವ್ಯವಹಾರ ನಿಯಮಗಳ ಸಂಪೂರ್ಣ ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 8 | ನೌಕರರ ರಾಜ್ಯ ವಿಮಾ ಇಲಾಖೆ | | ಇಲಾಖೆ ವೈದ್ಯರುಗಳಿಗೆ ಲಭ್ಯವಿರುವ ವಿವಿಧ ಭತ್ಯೆಗಳು ಮತ್ತು ವೇತನ ಬಗೆಗಿನ ವ್ಯವಹಾರ ನಿಯಮಗಳ ಸಂಪೂರ್ಣ ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 9 | ಆಯುಷ್ ಇಲಾಖೆ | | ಇಲಾಖೆ ವೈದ್ಯರುಗಳಿಗೆ ಲಭ್ಯವಿರುವ ವಿವಿಧ ಭತ್ಯೆಗಳು ಮತ್ತು ವೇತನ ಬಗೆಗಿನ ವ್ಯವಹಾರ ನಿಯಮಗಳ ಸಂಪೂರ್ಣ ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 10 | ಕರ್ನಾಟಕ ಸರ್ಕಾರಿ ವಿಮಾ ಇಲಾಖೆ | | ನೌಕರರ ವಿಮೆ ಕುರಿತ ವ್ಯವಹಾರ ನಿಯಮಗಳ ಸಂಪೂರ್ಣ ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 11 | ಖಜಾನೆ ಇಲಾಖೆ | | ಖಜಾನೆ ವ್ಯವಹಾರ ನಿಯಮಗಳ ಕುರಿತು ಸಂಪೂರ್ಣ ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 12 | ರಾಜ್ಯ ಲೆಕ್ಕತಪಾಸಣಾ ಮತ್ತು ಲೆಕ್ಕ ಪತ್ರ | | ಸರ್ಕಾರದ ವಿವಿಧ ವ್ಯವಹಾರ ನಿಯಮಗಳ ಸಂಪೂರ್ಣ ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 13 | ವಾಣಿಜ್ಯ ತೆರಿಗೆ | | ಇಲಾಖೆಯ ವ್ಯವಹಾರ ನಿಯಮಗಳ ಸಂಪೂರ್ಣ ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 14 | ಮುದ್ರಣ ಮತ್ತು ಲೇಖನ ಸಾಮಗ್ರಿಗಳ ಇಲಾಖೆ | | ಇಲಾಖೆಯ ವ್ಯವಹಾರ ನಿಯಮಗಳ ಸಂಪೂರ್ಣ ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 15 | ಉದ್ಯೋಗ ಮತ್ತು ತರಬೇತಿ ಇಲಾಖೆ | | ಇಲಾಖೆಯ ವ್ಯವಹಾರ ನಿಯಮಗಳ ಸಂಪೂರ್ಣ ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 16 | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ | | ಇಲಾಖೆಯ ವ್ಯವಹಾರ ನಿಯಮಗಳ ಸಂಪೂರ್ಣ ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |

| ಕ್ರ.ಸಂ. | ಇಲಾಖೆ | ಉಪಸಮಿತಿ ಸಭೆಯಲ್ಲಿ ಭಾಗವಹಿಸಬೇಕಾದ ದಿನಾಂಕ | ಹಾಜರಾಗಬೇಕಾದ ಸಿಬ್ಬಂದಿ |
|---|---|---|---|
| 17 | ಕೈಗಾರಿಕೆ ಮತ್ತು ವಾಣಿಜ್ಯ | | ಇಲಾಖೆಯ ವ್ಯವಹಾರ ನಿಯಮಗಳ ಸಂಪೂರ್ಣ ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ. |
| 18 | ಸಮಾಜ ಕಲ್ಯಾಣ | | ಇಲಾಖೆಯ ವ್ಯವಹಾರ ನಿಯಮಗಳ ಸಂಪೂರ್ಣ ಅರಿವಿರುವ ಒಬ್ಬ ಅಧಿಕಾರಿ ಮತ್ತು ಒಬ್ಬ ಸಿಬ್ಬಂದಿ |

**P.R. 523**

**SC-100**

**ಎ.ವಿ. ಶೈಲಜ,**
ಪೀಠಾಧಿಕಾರಿ–1,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** "ನ್ಯಾಷನಲ್ ಸೋಲಾರ್ ಮಿಷನ್" ಕಾರ್ಯಕ್ರಮದಡಿಯಲ್ಲಿ ಸೋಲಾರ್ ಎನರ್ಜಿ ಕಾರ್ಪೋರೇಷನ್ ಆಫ್ ಇಂಡಿಯಾ (SECI) ಮುಖಾಂತರ ಫೇಸ್–2, ಬ್ಯಾಚ್–3ರಲ್ಲಿ ರಾಜ್ಯಕ್ಕೆ ಬರುವ ಸೌರ ವಿದ್ಯುತ್‌ನ್ನು ರಾಜ್ಯದ ವಿದ್ಯುತ್ ವಿತರಣಾ ಕಂಪನಿಗಳಿಗೆ ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಜಂಟಿ ಕಾರ್ಯದರ್ಶಿಗಳು, ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯ, ಭಾರತ ಸರ್ಕಾರ ರವರ ಪತ್ರ ಸಂಖ್ಯೆ: 32/2/2014–15/GSP, ದಿನಾಂಕ: 28.12.2015.
2. ರಾಜ್ಯ ಸರ್ಕಾರದ ಪತ್ರ ಸಂಖ್ಯೆ: ಇಎನ್ 10 ವಿಎಸ್‌ಸಿ 2016, ದಿನಾಂಕ: 02.01.2016.
3. ವ್ಯವಸ್ಥಾಪಕ ನಿರ್ದೇಶಕರು, SECI ರವರ ಪತ್ರ ಸಂಖ್ಯೆ: SECI/2000 MW/Karnataka/2016/5818, ದಿನಾಂಕ: 15.01.2016.

**ಪ್ರಸ್ತಾವನೆ :**

ಕೇಂದ್ರ ಸರ್ಕಾರದ "ನ್ಯಾಷನಲ್ ಸೋಲಾರ್ ಮಿಷನ್" ಕಾರ್ಯಕ್ರಮದಡಿಯಲ್ಲಿ ಮೇಲೆ ಓದಲಾದ (1)ರಂತೆ ನ್ಯಾಷನಲ್ ಸೋಲಾರ್ ಮಿಷನ್ ಫೇಸ್–2, ಬ್ಯಾಚ್–3 State Specific VGF (Viability Gap Funding) Scheme ಕಾರ್ಯಕ್ರಮದಲ್ಲಿ SECI ಯಿಂದ ಸೌರ ವಿದ್ಯುತ್ತನ್ನು ರಾಜ್ಯಕ್ಕೆ ಹಂಚಿಕೆ ಮಾಡುವ ಕುರಿತು ಜಂಟಿ ಕಾರ್ಯದರ್ಶಿಗಳು, ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯ, ಭಾರತ ಸರ್ಕಾರದವರು ಪ್ರಸ್ತಾಪಿಸಿದ್ದು, ಈ ಯೋಜನೆಯಡಿ ವಿದ್ಯುತ್‌ನ್ನು ರಾಜ್ಯಕ್ಕೆ ಹಂಚಿಕೆ ಮಾಡಲು ಸಹಮತಿ ನೀಡುವಂತೆ ತಿಳಿಸಿರುತ್ತಾರೆ. ವಿದ್ಯುತ್ ವಿತರಣಾ ಕಂಪನಿಗಳೊಂದಿಗೆ 25 ವರ್ಷಕ್ಕೆ ವಿದ್ಯುತ್ ಮಾರಾಟ ಒಪ್ಪಂದವನ್ನು ಮಾಡಿಕೊಂಡು ವಿದ್ಯುತ್‌ನ್ನು ನೀಡಲಾಗುವುದು ಎಂದು ತಿಳಿಸಿರುತ್ತಾರೆ.

ಮೇಲೆ ಓದಲಾದ (2)ರಲ್ಲಿ ಕೇಂದ್ರ ಸರ್ಕಾರಕ್ಕೆ ನ್ಯಾಷನಲ್ ಸೋಲಾರ್ ಮಿಷನ್ ಫೇಸ್–2, ಬ್ಯಾಚ್–3 State Specific VGF (Viability Gap Funding) Scheme ಕಾರ್ಯಕ್ರಮದಲ್ಲಿ ರಾಜ್ಯಕ್ಕೆ 1000 ಮೆ.ವ್ಯಾ. ಸೌರ ವಿದ್ಯುತ್‌ನ್ನು ಹಂಚುವಂತೆ ಕೋರಲಾಗಿರುತ್ತದೆ. ಪ್ರಸ್ತುತ, ಮೇಲೆ ಓದಲಾದ (3)ರಂತೆ ವ್ಯವಸ್ಥಾಪಕ ನಿರ್ದೇಶಕರು, SECI ರವರು ರಾಜ್ಯದಲ್ಲಿ ನ್ಯಾಷನಲ್ ಸೋಲಾರ್ ಮಿಷನ್ ಫೇಸ್–2, ಬ್ಯಾಚ್–3 State Specific VGF Scheme ಕಾರ್ಯಕ್ರಮದಲ್ಲಿ 1000 ಮೆ.ವ್ಯಾ. ಸೌರ ವಿದ್ಯುತ್‌ನ್ನು ನೀಡುವ ಸಂಬಂಧ ರಾಜ್ಯದ ವಿವಿಧೆಡೆ 1000 ಮೆ.ವ್ಯಾ. 900 ಮೆ.ವ್ಯಾ.– NDCR & 100 ಮೆ.ವ್ಯಾ.– DCR) ಸಾಮರ್ಥ್ಯಕ್ಕೆ ಸೌರ ಯೋಜನೆಗಳನ್ನು ಅನುಷ್ಠಾನಗೊಳಿಸಲು ಟೆಂಡರ್ ಕರೆಯಲಾಗಿರುತ್ತದೆ ಎಂದು ತಿಳಿಸಿರುತ್ತಾರೆ.

ಈ ವಿದ್ಯುತ್ ಸಾಮರ್ಥ್ಯವನ್ನು ರಾಜ್ಯದ ವಿದ್ಯುತ್ ವಿತರಣಾ ಕಂಪನಿಗಳಿಗೆ ಮರು ಹಂಚಿಕೆ ಮಾಡುವ ಅವಶ್ಯಕತೆ ಇರುವುದರಿಂದ ಹಾಗೂ ವಿದ್ಯುತ್ ವಿತರಣಾ ಕಂಪನಿಗಳು SECI ರವರೊಂದಿಗೆ ಮುಂದಿನ ಕ್ರಮವಹಿಸಲು ಅನುವು ಮಾಡಿಕೊಡಲು ಉದ್ದೇಶಿಸಿದೆ.

ನ್ಯಾಷನಲ್ ಸೋಲಾರ್ ಮಿಷನ್ ಫೇಸ್–2, ಬ್ಯಾಚ್–3 State Specific VGF Scheme ಕಾರ್ಯಕ್ರಮದಲ್ಲಿ ರಾಜ್ಯಕ್ಕೆ SECI ಯಿಂದ ಬರುವ 1000 ಮೆ.ವ್ಯಾ. ಸೌರ ವಿದ್ಯುತ್ ಸಾಮರ್ಥ್ಯವನ್ನು ಸರ್ಕಾರದ ಆದೇಶ ಸಂಖ್ಯೆ ಇಎನ್ 57 ವಿಎಸ್‌ಸಿ 2015, ದಿನಾಂಕ: 31.03.2016 ರಂತೆ ರಾಜ್ಯದ ವಿವಿಧ ಮೂಲಗಳಿಂದ ದೊರಕುವ ವಿದ್ಯುತ್ ಶೇಕಡವಾರು ಪ್ರಮಾಣದಲ್ಲಿ ವಿದ್ಯುತ್ ವಿತರಣಾ ಕಂಪನಿಗಳಿಗೆ ಹಂಚಿಕೆಯಾಗಿರುವ ಅನುಪಾತದಲ್ಲಿ, ಎಲ್ಲಾ ವಿದ್ಯುತ್ ವಿತರಣಾ ಕಂಪನಿಗಳಿಗೆ ಹಂಚಲು ಉದ್ದೇಶಿಸಿದೆ. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಗಿನ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 10 ವಿಎಸ್‌ಸಿ 2016, ಬೆಂಗಳೂರು, ದಿನಾಂಕ: 30.06.2016.**

ನ್ಯಾಷನಲ್ ಸೋಲಾರ್ ಮಿಷನ್ ಫೇಸ್–2, ಬ್ಯಾಚ್–3 State Specific VGF Scheme ಕಾರ್ಯಕ್ರಮದಲ್ಲಿ ರಾಜ್ಯಕ್ಕೆ ಸೋಲಾರ್ ಎನರ್ಜಿ ಕಾರ್ಪೋರೇಷನ್ ಆಫ್ ಇಂಡಿಯಾ (SECI) ಯಿಂದ ಸರಬರಾಜಾಗುವ 1000 ಮೆ.ವ್ಯಾ. ಸಾಮರ್ಥ್ಯದ ಸೌರವಿದ್ಯುತ್‌ನ್ನು ಈ ಕೆಳಕಂಡ ಅನುಪಾತದಂತೆ ವಿದ್ಯುತ್ ವಿತರಣಾ ಕಂಪನಿಗಳಿಗೆ ಹಂಚಿಕೆ ಮಾಡಿ ಆದೇಶಿಸಿದೆ.

| ವಿತರಣಾ ಕಂಪನಿ | ಶೇಕಡವಾರು ವಿದ್ಯುತ್ ಹಂಚಿಕೆ ಪ್ರಮಾಣ | ಸೌರ ವಿದ್ಯುತ್ ಸಾಮರ್ಥ್ಯ (ಮೆ.ವ್ಯಾನಲ್ಲಿ) |
|---|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 47.78% | 477.8 |
| ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 8.02% | 80.2 |

| ವಿತರಣಾ ಕಂಪನಿ | ಶೇಕಡವಾರು ವಿದ್ಯುತ್ ಹಂಚಿಕೆ ಪ್ರಮಾಣ | ಸೌರ ವಿದ್ಯುತ್ ಸಾಮರ್ಥ್ಯ (ಮೆ.ವ್ಯಾನಲ್ಲಿ) |
|---|---|---|
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 19.46% | 194.6 |
| ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 13.68% | 136.8 |
| ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ | 11.06% | 110.6 |
| **ಒಟ್ಟಾರೆ** | **100%** | **1000** |

**ನಿಬಂಧನೆಗಳು :**

1. ಈ ಆದೇಶವು ನ್ಯಾಷನಲ್ ಸೋಲಾರ್ ಮಿಷನ್ ರ ಫೇಸ್-2, ಬ್ಯಾಚ್-3 State Specific VGF Scheme ಕಾರ್ಯಕ್ರಮದಲ್ಲಿ ರಾಜ್ಯಕ್ಕೆ ವಿದ್ಯುತ್ ಸರಬರಾಜಾಗುವ ದಿನಾಂಕದಿಂದ ಮುಂದಿನ ಆದೇಶದವರೆಗೂ ಜಾರಿಯಲ್ಲಿರುತ್ತದೆ.
2. ಈ ಶೇಕಡಾವಾರು ವಿದ್ಯುತ್ ಹಂಚಿಕೆ ಪ್ರಮಾಣವು ಕೇಂದ್ರ ಸರ್ಕಾರದ SECI ಯಿಂದ ಸರಬರಾಜಾಗುವ ವಿದ್ಯುತ್ ಪ್ರಮಾಣಕ್ಕೆ ಮಾತ್ರ ಅನ್ವಯಿಸುತ್ತದೆ.
3. ವಿದ್ಯುತ್ ವಿತರಣಾ ಕಂಪನಿಗಳು SECI ರವರೊಂದಿಗೆ ವಿದ್ಯುತ್ ಖರೀದಿ ಒಪ್ಪಂದ ಮಾಡಿಕೊಳ್ಳುವುದು.
4. ಈ ಆದೇಶದಂತೆ ವಿತರಣಾ ಕಂಪನಿವಾರು ಹಂಚಿಕೆ ಮಾಡಲಾದ ವಿದ್ಯುತ್ ಪ್ರಮಾಣವನ್ನು ತಪ್ಪದೇ ಪಾಲಿಸುವುದು ಮತ್ತು ಈ ಹಂಚಿಕೆಯು ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.
5. ಈ ಆದೇಶದ ನಿಬಂಧನೆಗಳನ್ನು ಮಾರ್ಪಡಿಸುವ ಅಧಿಕಾರ ಸರ್ಕಾರ ಹೊಂದಿದೆ.

**P.R. 524**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ, ಪಾವಗಡ ತಾಲ್ಲೂಕಿನ ವಿವಿಧ ಗ್ರಾಮಗಳ ಸರಹದ್ದಿನಲ್ಲಿ ಕರ್ನಾಟಕ ಸೋಲಾರ್ ಪವರ್ ಡೆವಲಪ್‌ಮೆಂಟ್ ಕಾರ್ಪೋರೇಷನ್ ಲಿಮಿಟೆಡ್ (KSPDCL) ವತಿಯಿಂದ ಸ್ಥಾಪಿಸಲು ಉದ್ದೇಶಿಸಿರುವ ಸೋಲಾರ್ ಪಾರ್ಕ್‌ನಲ್ಲಿ ಉಪಕೇಂದ್ರಗಳಿಗೆ ಸಂಬಂಧಿಸಿದಂತೆ ತಾಂತ್ರಿಕ ಸಮನ್ವಯ ಸಮಿತಿ ರಚನೆ ಕುರಿತು.

**ಓದಲಾಗಿದೆ :** ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, KSPDCL ರವರ ಪತ್ರ ಸಂಖ್ಯೆ: KSPDCL/F-29/2015/16/128, ದಿನಾಂಕ: 12.05.2016.

**ಪ್ರಸ್ತಾವನೆ :**

ತುಮಕೂರು ಜಿಲ್ಲೆ, ಪಾವಗಡ ತಾಲ್ಲೂಕಿನ ವಿವಿಧ ಗ್ರಾಮಗಳ ಸರಹದ್ದಿನಲ್ಲಿ ಸೋಲಾರ್ ಪಾರ್ಕ್ ಅಭಿವೃದ್ಧಿಗಾಗಿ ಈಗಾಗಲೇ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಮತ್ತು ಕೇಂದ್ರ ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟಿರುವ M/s. Solar Energy Corporation of India ಜಂಟಿ ಸಹಯೋಗದೊಂದಿಗೆ KSPDCL ಕಂಪನಿಯನ್ನು ರಚಿಸಲಾಗಿರುತ್ತದೆ. ಸದರಿ ಕಂಪನಿಯು ತುಮಕೂರು ಜಿಲ್ಲೆ ಪಾವಗಡ ತಾಲ್ಲೂಕು ನಾಗಲಮಡಿಕೆ ಹೋಬಳಿಯ ವಳ್ಳೂರು, ಕ್ಯಾತಗಾನಚೆರ್ಲು, ಬಳಸಮುದ್ರ, ತಿರುಮಣಿ, ರಾಯಚೆರ್ಲು/ಅಚ್ಚಮ್ಮನಹಳ್ಳಿ ಗ್ರಾಮಗಳಲ್ಲಿ ಸೋಲಾರ್ ಪಾರ್ಕ್ ಸ್ಥಾಪಿಸಲು ಉದ್ದೇಶಿಸಿದೆ.

ಮುಂದುವರೆದು, ಸೋಲಾರ್ ಪಾರ್ಕ್‌ನಲ್ಲಿ ಉತ್ಪಾದನೆಯಾದ ವಿದ್ಯುತ್‌ನ್ನು ಗ್ರಿಡ್‌ಗೆ ಸಂಪರ್ಕಿಸಲು ಈಗಾಗಲೇ 8 ಸಂಖ್ಯೆಯ 2x150 MVA, 220/66/33 KV ಉಪಕೇಂದ್ರಗಳನ್ನು ಸ್ಥಾಪಿಸಲು KSPDCL ಮುಖಾಂತರ ಕ್ರಮ ಕೈಗೊಳ್ಳಲಾಗಿರುತ್ತದೆ. ಉಪಕೇಂದ್ರ ಸ್ಥಾಪನೆಗೆ ಸಂಬಂಧಿಸಿದಂತೆ ಸಲ್ಲಿಸುವ ನಕಾಶೆಗಳಿಗೆ ಅನುಮತಿ, ತಪಾಸಣೆ ಹಾಗೂ ಉಪಕರಣಗಳ ಜೋಡಣೆಯಾದ ನಂತರ (completion of erection of equipments) ಪೂರ್ವ ನಿಯೋಜಿತ ಪರೀಕ್ಷೆ (pre-commissioning test) ಯನ್ನು KSPDCL ಕಂಪನಿಯು ಮಾಡಬೇಕಾಗಿರುತ್ತದೆ. ಈ ಕಾರ್ಯಗಳ ನಿರ್ವಹಣೆ ಮತ್ತು ಅಂಗೀಕಾರಕ್ಕೆ ಮುಖ್ಯ ಇಂಜಿನಿಯರ್(ವಿ), ಕೆ.ಪಿ.ಟಿ.ಸಿ.ಎಲ್. ರವರನ್ನೊಳಗೊಂಡ ಸಮಿತಿಯನ್ನು ರಚಿಸುವಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, KSPDCL ರವರು ಮೇಲೆ ಓದಲಾದ ಪತ್ರದಲ್ಲಿ ಮನವಿ ಸಲ್ಲಿಸಿರುತ್ತಾರೆ. KSPDCL ಮುಖಾಂತರ ಸೋಲಾರ್ ಪಾರ್ಕ್‌ನಲ್ಲಿ ಸ್ಥಾಪಿಸುವ ಉಪಕೇಂದ್ರಗಳ ಸಂಬಂಧ ತಾಂತ್ರಿಕ ಸಮನ್ವಯ ಸಮಿತಿಯನ್ನು ರಚಿಸುವ ಅವಶ್ಯಕತೆ ಇರುತ್ತದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 26 ವಿಎಸ್‌ಸಿ 2015, ಬೆಂಗಳೂರು, ದಿನಾಂಕ: 28.06.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ತುಮಕೂರು ಜಿಲ್ಲೆ, ಪಾವಗಡ ತಾಲ್ಲೂಕಿನ ವಿವಿಧ ಗ್ರಾಮಗಳ ಸರಹದ್ದಿನಲ್ಲಿ ಕರ್ನಾಟಕ ಸೋಲಾರ್ ಪವರ್ ಡೆವಲಪ್‌ಮೆಂಟ್ ಕಾರ್ಪೋರೇಷನ್ ಲಿಮಿಟೆಡ್ (KSPDCL) ವತಿಯಿಂದ ಸ್ಥಾಪಿಸಲು ಉದ್ದೇಶಿಸಿರುವ ಸೋಲಾರ್ ಪಾರ್ಕ್‌ನಲ್ಲಿ ಸ್ಥಾಪಿಸುವ ಉಪಕೇಂದ್ರಗಳಿಗೆ ಸಂಬಂಧಿಸಿದಂತೆ ಈ ಕೆಳಂಡಂತೆ ತಾಂತ್ರಿಕ ಸಮನ್ವಯ ಸಮಿತಿ ರಚಿಸಿ ಆದೇಶಿಸಿದೆ.

| | | |
|---|---|---|
| 1 | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಕೆಎಸ್‌ಪಿಡಿಸಿಎಲ್, ಬೆಂಗಳೂರು. | ಅಧ್ಯಕ್ಷರು |
| 2 | ಮುಖ್ಯ ವಿದ್ಯುತ್ ಪರಿವೀಕ್ಷಕರು, ನಿರ್ಮಾಣ ಭವನ, ಡಾ॥ ರಾಜಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು. | ಸದಸ್ಯರು |
| 3 | ಮುಖ್ಯ ಇಂಜಿನಿಯರ್ (ವಿ), ಯೋಜನೆ ಮತ್ತು ಸಮನ್ವಯ (P&C), ಕೆಪಿಟಿಸಿಎಲ್, ಕಾವೇರಿ ಭವನ, ಬೆಂಗಳೂರು. | ಸದಸ್ಯರು |
| 4 | ಮುಖ್ಯ ಇಂಜಿನಿಯರ್ (ವಿ), TA&QC, ಕೆಪಿಟಿಸಿಎಲ್, ಕಾವೇರಿ ಭವನ, ಬೆಂಗಳೂರು. | ಸದಸ್ಯರು |
| 5 | ಮುಖ್ಯ ಇಂಜಿನಿಯರ್ (ವಿ), RT&RD, ಕೆಪಿಟಿಸಿಎಲ್, ಕಾವೇರಿ ಭವನ, ಬೆಂಗಳೂರು. | ಸದಸ್ಯರು |
| 6 | ಮುಖ್ಯ ಇಂಜಿನಿಯರ್ (ವಿ), SLDC, ಕೆಪಿಟಿಸಿಎಲ್, ರೇಸ್ ಕೋರ್ಸ್ ರಸ್ತೆ, ಬೆಂಗಳೂರು. | ಸದಸ್ಯರು |
| 7 | ಪ್ರಧಾನ ವ್ಯವಸ್ಥಾಪಕರು, ಕೆಎಸ್‌ಪಿಡಿಸಿಎಲ್, ಬೆಂಗಳೂರು. | ಸದಸ್ಯ ಕಾರ್ಯದರ್ಶಿ |

**ಸಮಿತಿಯ ಕಾರ್ಯ ಚಟುವಟಿಕೆಗಳು :**

1. ಸೋಲಾರ್ ಪಾರ್ಕ್‌ನಲ್ಲಿ ಸ್ಥಾಪಿಸುವ ವಿದ್ಯುತ್ ಪ್ರಸರಣಾ ಮಾರ್ಗ ಮತ್ತು ವಿದ್ಯುತ್ ಉಪಕೇಂದ್ರಗಳ ಕಾಮಗಾರಿಗಳ ಮೇಲ್ವಿಚಾರಣೆ.
2. ಸೋಲಾರ್ ಪಾರ್ಕ್‌ನಲ್ಲಿ ನಿರ್ಮಿಸಿರುವ ವಿದ್ಯುತ್ ಉಪಕೇಂದ್ರ ಮತ್ತು ವಿದ್ಯುತ್ ಪ್ರಸರಣಾ ಮಾರ್ಗಗಳ ಕಾಮಗಾರಿಗಳು ತಾಂತ್ರಿಕ ಅನುಮೋದಿತ ಗುಣಮಟ್ಟಕ್ಕೆ ಅನುಗುಣವಾಗಿರುವ ಬಗ್ಗೆ ಖಾತರಿ ಮಾಡಿಕೊಳ್ಳುವುದು.
3. ಸಮಿತಿಯು ಕಾಮಗಾರಿಗಳ ಪ್ರಗತಿಯ ಬಗ್ಗೆ ಆಗಿಂದಾಗ್ಗೆ ಮೇಲ್ವಿಚಾರಣೆ ಮಾಡಿ ಸರ್ಕಾರಕ್ಕೆ ವರದಿ ಮಾಡುವುದು ಮತ್ತು ಕರ್ನಾಟಕ ಪ್ರತಿಷ್ಠೆಯ ಯೋಜನೆಯಾಗಿರುವ ಸೋಲಾರ್ ಪಾರ್ಕ್‌ನ್ನು ನಿಗಧಿತ ಸಮಯದಲ್ಲಿ ಪೂರ್ಣಗೊಳಿಸುವುದು.

**P.R. 525**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿಶ್ವನಾಥ ಪಿ. ಹಿರೇಮಠ,**
ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಸೌರ ಮೇಲ್ಛಾವಣಿ ವಿದ್ಯುತ್ ಘಟಕಗಳ ಸ್ಥಾಪನೆಗೆ ನಿಯಮಬಾಹಿರವಾಗಿ ಅನುಮತಿ ನೀಡಿರುವ ಸಂಬಂಧ ವಿಚಾರಣೆ ನಡೆಸಿ ವರದಿ ನೀಡಲು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಗೆ ಹೆಚ್ಚುವರಿ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :**
1. ಮಾನ್ಯ ಇಂಧನ ಸಚಿವರ ಟಿಪ್ಪಣಿ ಸಂಖ್ಯೆ: ಇಂಸ/ಕ/115/2015–16, ದಿನಾಂಕ: 17.05.2016.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 70 ವಿಎಸ್‌ಸಿ 2015, ದಿನಾಂಕ: 21.05.2016.

**ಪ್ರಸ್ತಾವನೆ :**

ಸರ್ಕಾರವು ಮೇಲೆ ಓದಲಾದ (2)ರ ಆದೇಶದಲ್ಲಿ ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಬರುವ ಸೌರ ಮೇಲ್ಛಾವಣಿ ವಿದ್ಯುತ್ ಘಟಕಗಳಿಗೆ ಸಂಬಂಧಿಸಿದಂತೆ ನಡೆದಿರಬಹುದಾದ ನಿಯಮಭಾಹಿರ ಕ್ರಮಗಳ ಬಗ್ಗೆ ಸ್ಥಳ ಪರಿಶೀಲನೆ ನಡೆಸಿ, ಸಮಗ್ರ ತನಿಖಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಅಧಿಕಾರಿಗಳನ್ನೊಳಗೊಂಡ ತಂಡಗಳನ್ನು ಕಂಪನಿವಾರು ರಚಿಸಿ ಆದೇಶಿಸಲಾಗಿರುತ್ತದೆ.

ಮುಂದುವರೆದು, ಬೆಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಪ್ರಸ್ತುತ ಮುಖ್ಯ ಇಂಜಿನಿಯರ್ (ವಿ) ರವರ ನೇತೃತ್ವದಲ್ಲಿ ತಂಡವನ್ನು ಈಗಾಗಲೇ ರಚಿಸಲಾಗಿದ್ದು, ಸದರಿ ಕಂಪನಿ ವ್ಯಾಪ್ತಿಯಡಿಯಲ್ಲಿ 1575 ಸಂಖ್ಯೆಯ ಸ್ಥಾವರಗಳಿರುವುದು ಮನಗಂಡು ಸರ್ಕಾರವು ಬೆಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಪ್ರಸ್ತುತ ಇರುವ ತಂಡವನ್ನು ಮುಂದುವರೆಸಿಕೊಂಡು ಹೆಚ್ಚುವರಿಯಾಗಿ ಇನ್ನೊಂದು ತಂಡವನ್ನು ರಚಿಸಲು ತೀರ್ಮಾನಿಸಲಾಗಿರುತ್ತದೆ.

ಈ ಹಿನ್ನೆಲೆಯಲ್ಲಿ, ಮೇಲೆ ಓದಲಾದ (2)ರ ಆದೇಶವನ್ನು ಮುಂದುವರೆಸಿಕೊಂಡು ಸ್ಥಳ ಪರಿಶೀಲಿಸಿ, ವಿಚಾರಣೆ ನಡೆಸಿ, ಸರ್ಕಾರಕ್ಕೆ ವರದಿ ಮಾಡಲು ಬೆಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಮುಖ್ಯ ಇಂಜಿನಿಯರ್ ನೇತೃತ್ವದಲ್ಲಿ ಎರಡು ತನಿಖಾ ತಂಡಗಳನ್ನು ರಚಿಸಲು ತೀರ್ಮಾನಿಸಲಾಗಿದೆ. ಅದರಂತೆ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 70 ವಿಎಸ್‌ಸಿ 2015, ಬೆಂಗಳೂರು, ದಿನಾಂಕ: 03.06.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಬೆಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಬರುವ ಸೌರ ಮೇಲ್ಛಾವಣಿ ವಿದ್ಯುತ್ ಘಟಕಗಳಿಗೆ ಸಂಬಂಧಿಸಿದಂತೆ ನಡೆದಿರಬಹುದಾದ ನಿಯಮಬಾಹಿರ ಕ್ರಮಗಳ ಬಗ್ಗೆ ಸ್ಥಳ ಪರಿಶೀಲನೆ ನಡೆಸಿ, ಸಮಗ್ರ ತನಿಖಾ ವರದಿಯನ್ನು **ಒಂದು ತಿಂಗಳೊಳಗೆ** ಸರ್ಕಾರಕ್ಕೆ ಸಲ್ಲಿಸಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ತಂಡಗಳನ್ನು ರಚಿಸಿ ಆದೇಶಿಸಲಾಗಿದೆ.

| ಕ್ರ ಸಂ. | ಬೆಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿ | ಅಧಿಕಾರಿಯ ಹೆಸರು ಮತ್ತು ಪದನಾಮ | ಮೊಬೈಲ್ ಸಂಖ್ಯೆ | ಸ್ಥಳ ಪರಿಶೀಲನೆ ವ್ಯಾಪ್ತಿ |
|---|---|---|---|---|
| 1 | ತಂಡ (1) | ಶ್ರೀ ಎ.ಜೆ. ಹೊಸಮನಿ, ಮುಖ್ಯ ಇಂಜಿನಿಯರ್, Planning & Co-ordination, ಕೆ.ಪಿ.ಟಿ.ಸಿ.ಎಲ್, ಕಾವೇರಿ ಭವನ, ಬೆಂಗಳೂರು. | 9448363092 | BNAZ ಮತ್ತು BRAZ (ನೆಲಮಂಗಲ ವಿಭಾಗ ಹೊರತುಪಡಿಸಿ) |
| 2 | | ಶ್ರೀ ಎನ್. ಸುರೇಶ್, ಪ್ರಧಾನ ವ್ಯವಸ್ಥಾಪಕರು (ತಾಂತ್ರಿಕ), ಕೆ.ಆರ್.ಇ.ಡಿ.ಎಲ್. ಬೆಂಗಳೂರು. | 9480811542 | |
| 3 | | ಶ್ರೀ ಎಸ್.ಆರ್. ರವಿ, ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಪ್ರಸರಣ ವಲಯ, ಬೆಂಗಳೂರು. | 9448998074 | |
| 1 | ತಂಡ (2) | ಶ್ರೀ ಗೊದೆ ಗುಂಡಪ್ಪ, ಮುಖ್ಯ ಇಂಜಿನಿಯರ್, TA & QC, ಕೆ.ಪಿ.ಟಿ.ಸಿ.ಎಲ್. ಕಾವೇರಿ ಭವನ, ಬೆಂಗಳೂರು. | 9448121111 | CTAZ ಮತ್ತು ನೆಲಮಂಗಲ ವಿಭಾಗ |
| 2 | | ಶ್ರೀ ಲಕ್ಷ್ಮೀಶ ಎನ್. ಅಧೀಕ್ಷಕ ಇಂಜಿನಿಯರ್ (ವಿ), ಮುಖ್ಯ ಇಂಜಿನಿಯರ್‌ರವರ ಕಛೇರಿ ಪ್ರಸರಣ ವಲಯ, ತುಮಕೂರು. | 9448998890 | |
| 3 | | ಶ್ರೀ ಲಕ್ಷ್ಮೀಕಾಂತ ಬಿ.ಎಸ್. ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಎಂ.ಐ.ಎಸ್, ಕೆ.ಪಿ.ಟಿ.ಸಿ.ಎಲ್., ಕಾವೇರಿ ಭವನ, ಬೆಂಗಳೂರು. | 9448365072 | |

**ನಿಬಂಧನೆಗಳು :**

1. ಮೇಲ್ಕಂಡ ತನಿಖಾ ತಂಡಗಳಿಗೆ ನಿಯೋಜಿಸಿರುವ ಅಧಿಕಾರಿಗಳಿಗೆ ನಿಯಮಾನುಸಾರ ಪಾವತಿಸಬೇಕಾದ ಭತ್ಯೆಗಳನ್ನು ಸಂಬಂಧಪಟ್ಟ ಇಂಧನ ಇಲಾಖೆಯ ಅಧೀನ ಸಂಸ್ಥೆಗಳು ಭರಿಸತಕ್ಕದ್ದು.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 70 ವಿಎಸ್‌ಸಿ 2015, ದಿನಾಂಕ: 21.05.2016ರಲ್ಲಿ ತಿಳಿಸಿರುವ ಇತರೆ ಅಂಶಗಳು ಯಥಾವತ್ತಾಗಿ ಮುಂದುವರೆಯುತ್ತದೆ.

**P.R. 526**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿಶ್ವನಾಥ ಪಿ. ಹಿರೇಮಠ,**
ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಸೌರ ಮೇಲ್ಛಾವಣೆ ವಿದ್ಯುತ್ ಘಟಕಗಳ ಸ್ಥಾಪನೆಗೆ ನಿಯಮಬಾಹಿರವಾಗಿ ಅನುಮತಿ ನೀಡಿರುವ ಸಂಬಂಧ ವಿಚಾರಣೆ ನಡೆಸಿ ವರದಿ ನೀಡಲು ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** ಮಾನ್ಯ ಇಂಧನ ಸಚಿವರ ಟಿಪ್ಪಣಿ ಸಂಖ್ಯೆ: ಇಂಸ/ಕ/115/2015–16, ದಿನಾಂಕ: 17.05.2016.

**ಪ್ರಸ್ತಾವನೆ :**

ರಾಜ್ಯದ ಕಟ್ಟಡಗಳ ಮೇಲ್ಛಾವಣೆ ಮೇಲೆ ಸೌರ ವಿದ್ಯುತ್ ಉತ್ಪಾದನೆಯನ್ನು ಪ್ರೋತ್ಸಾಹಿಸಲು ಸೌರ ನೀತಿ ಅಡಿಯಲ್ಲಿ ಯೋಜನೆಯನ್ನು ರೂಪಿಸಲಾಗಿದೆ. ಆದರೆ, ಕೆಲವು ಅಧಿಕಾರಿಗಳು ಕಟ್ಟಡಗಳು ಇಲ್ಲದೆ ಇರುವ ಕಡೆ ಹಾಗೂ ಮಾರ್ಗ ಸಾಮರ್ಥ್ಯವನ್ನು ಪರಿಶೀಲಿಸಿ, ಸಾಧ್ಯತಾ ವರದಿಯನ್ನು ಪಡೆದು ಮೇಲ್ಛಾವಣೆ ಸೌರ ವಿದ್ಯುತ್ ಉತ್ಪಾದನೆಗೆ ರವಾನೆ ಮಾರ್ಗ ಜೋಡಣಾ ವ್ಯವಸ್ಥೆಯನ್ನು ಕಲ್ಪಿಸುವಲ್ಲಿ ನಿಯಮಭಾಹಿರವಾಗಿ ಅನುಮತಿ ನೀಡಿರುವುದು ಗಮನಕ್ಕೆ ಬಂದಿರುತ್ತದೆ. ಕೆಲವು ಪ್ರಕರಣಗಳಲ್ಲಿ ಒಟ್ಟು ಸಾಮರ್ಥ್ಯವನ್ನು ತುಂಡು ಮಾಡಿ ಮಾರ್ಗಸೂಚಿಗಳನ್ನು ಉಲ್ಲಂಘಿಸಿ, ಅನುಮತಿ ನೀಡಿರುವುದೂ ಸಹ ವರದಿಯಾಗಿರುತ್ತದೆ. ಈ ರೀತಿ ನಿಯಮಭಾಹಿರ ಕ್ರಮದಿಂದ ಸರ್ಕಾರದ ಯೋಜನೆಯ ಮೂಲ ಉದ್ದೇಶವು ವಿಫಲಗೊಳ್ಳಲು ಅವಕಾಶ ಮಾಡಿಕೊಟ್ಟಂತಾಗಿದೆ. ಆದುದರಿಂದ ನಿಯಮಗಳನ್ನು ಉಲ್ಲಂಘನೆ ಮಾಡಿರುವ ಅಧಿಕಾರಿ/ಸಿಬ್ಬಂದಿಗಳನ್ನು ಪತ್ತೆ ಮಾಡಿ, ಶಿಸ್ತು ಕ್ರಮ ಕೈಗೊಳ್ಳುವಂತೆ ಉಲ್ಲೇಖಿತ ಟಿಪ್ಪಣಿಯಲ್ಲಿ ಸೂಚಿಸಲಾಗಿರುತ್ತದೆ.

ಈ ಹಿನ್ನೆಲೆಯಲ್ಲಿ, ಸ್ಥಳ ಪರಿಶೀಲಿಸಿ, ವಿಚಾರಣೆ ನಡೆಸಿ, ಸರ್ಕಾರಕ್ಕೆ ವರದಿ ಮಾಡಲು ಮುಖ್ಯ ಇಂಜಿನಿಯರ್ ನೇತೃತ್ವದಲ್ಲಿ ತನಿಖಾ ತಂಡಗಳನ್ನು ರಚಿಸಲು ತೀರ್ಮಾನಿಸಲಾಗಿದೆ. ಅದರಂತೆ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 70 ವಿಎಸ್‌ಸಿ 2015, ಬೆಂಗಳೂರು, ದಿನಾಂಕ: 21.05.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಬರುವ ಸೌರ ಮೇಲ್ಛಾವಣೆ ವಿದ್ಯುತ್ ಘಟಕಗಳಿಗೆ ಸಂಬಂಧಿಸಿದಂತೆ ಕೆಳಕಂಡ ನಿರ್ದಿಷ್ಟ ಅಂಶಗಳಲ್ಲಿ ನಡೆದಿರಬಹುದಾದ ನಿಯಮಭಾಹಿರ ಕ್ರಮಗಳ ಬಗ್ಗೆ ಸ್ಥಳ ಪರಿಶೀಲನೆ ನಡೆಸಿ, ಸಮಗ್ರ ತನಿಖಾ ವರದಿಯನ್ನು **ಒಂದು ತಿಂಗಳೊಳಗೆ** ಸರ್ಕಾರಕ್ಕೆ ಸಲ್ಲಿಸಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ತಂಡಗಳನ್ನು ಕಂಪನಿವಾರು ರಚಿಸಿ ಆದೇಶಿಸಲಾಗಿದೆ.

**ಪ್ರಮುಖ ತನಿಖಾ ಅಂಶಗಳು:**

1. ಸ್ಥಾವರದ ಆರ್.ಆರ್. ಸಂಖ್ಯೆ
2. ಸೌರ ಮೇಲ್ಛಾವಣಿ ವಿದ್ಯುತ್ ಘಟಕದ ಸಾಮರ್ಥ್ಯ
3. ಅನುಮತಿ ನೀಡಿರುವ ಬಗ್ಗೆ ದಾಖಲೆಗಳು
4. 11 ಕೆ.ವಿ. ಮಾರ್ಗದ ತಾಂತ್ರಿಕ ಸಾಧ್ಯತಾ ವರದಿ (Feasibility Report) ಪರಿಶೀಲನೆ
5. ಸ್ಥಾವರಕ್ಕೆ ಅನುಮತಿ ನೀಡಿರುವ ರವಾನೆ ಮಾರ್ಗ ಜೋಡಣಾ ವ್ಯವಸ್ಥೆ (Connectivity approved)
6. ವಿದ್ಯುತ್ ಖರೀದಿ ಒಪ್ಪಂದಗಳು
7. ಒಟ್ಟು ಸಾಮರ್ಥ್ಯವನ್ನು ವಿಭಾಗಿಸಿ ರವಾನೆ ಮಾರ್ಗ ಜೋಡಣಾ ವ್ಯವಸ್ಥೆ ನೀಡಿರುವ ಬಗ್ಗೆ ಪರಿಶೀಲನೆ, ಇತ್ಯಾದಿ ಅಂಶಗ

| ಕ್ರ. ಸಂ. | ವಿದ್ಯುತ್ ಸರಬರಾಜು ಕಂಪನಿ | ಅಧಿಕಾರಿಯ ಹೆಸರು ಮತ್ತು ಪದನಾಮ | ಮೊಬೈಲ್ ಸಂಖ್ಯೆ |
|---|---|---|---|
| 1 | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | ಶ್ರೀ ಎ.ಜೆ. ಹೊಸಮನಿ, ಮುಖ್ಯ ಇಂಜಿನಿಯರ್, Planning & Co-ordination, ಕೆ.ಪಿ.ಟಿ.ಸಿ.ಎಲ್, ಕಾವೇರಿ ಭವನ, ಬೆಂಗಳೂರು. | 9448363092 |
| 2 | | ಶ್ರೀ ಎನ್. ಸುರೇಶ್, ಪ್ರಧಾನ ವ್ಯವಸ್ಥಾಪಕರು (ತಾಂತ್ರಿಕ), ಕೆ.ಆರ್.ಇ.ಡಿ.ಎಲ್. ಬೆಂಗಳೂರು. | 9480811542 |
| 3 | | ಶ್ರೀ ಎಸ್.ಆರ್. ರವಿ, ಕಾರ್ಯನಿರ್ವಾಹಕ ಇಂಜಿನಿಯರ್ (ವಿ.), ಪ್ರಸರಣ ವಲಯ, ಬೆಂಗಳೂರು. | 9448998074 |
| 1 | ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | ಶ್ರೀ ಸಿದ್ದರಾಜು, ಮುಖ್ಯ ಇಂಜಿನಿಯರ್, ಪ್ರಸರಣ ವಲಯ, ಬಾಗಲಕೋಟೆ. | 9448351531 |
| 2 | | ಶ್ರೀ ಜಗನ್ನಾಥ್ ಚಿಡಗುಂಪಿ, ಅಧೀಕ್ಷಕ ಇಂಜಿನಿಯರ್ (ವಿ.), ಕಾರ್ಯ ಮತ್ತು ನಿರ್ವಾಹಣೆ ವೃತ್ತ ಕೆ.ಪಿ.ಟಿ.ಸಿ.ಎಲ್, ಕಲಬುರ್ಗಿ | 9448365051 |
| 3 | | ಶ್ರೀ ಇ. ಪ್ರಹ್ಲಾದ್, ಕಾರ್ಯನಿರ್ವಾಹಕ ಇಂಜಿನಿಯರ್ (ವಿ.), TL & SS, ವಿಭಾಗ, ಮುನಿರಾಬಾದ್. | 9448365466 |
| 1 | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | ಶ್ರೀ ಡಿ.ಬಿ. ಸುರೇಶ್, ಅಧೀಕ್ಷಕ ಇಂಜನಿಯರ್ (ವಿ), ಯೋಜನೆ, ಕೆ.ಪಿ.ಟಿ.ಸಿ.ಎಲ್. ಕಾವೇರಿ ಭವನ, ಬೆಂಗಳೂರು. | 9448365180 |
| 2 | | ಶ್ರೀ ಬಿ.ಎಸ್. ಸುಚೇತನ, ಕಾರ್ಯನಿರ್ವಾಹಕ ಇಂಜಿನಿಯರ್ (ವಿ.), ಪ್ರಸರಣ ವಲಯ, ಬಾಗಲಕೋಟೆ. | 9448365288 |
| 3 | | ಶ್ರೀ ವಿಶ್ವನಾಥ್ ರಾವ್ ಸೋಲಂಕಿ, ಕಾರ್ಯನಿರ್ವಾಹಕ ಇಂಜಿನಿಯರ್ (ವಿ.), ಜಾಗೃತದಳ, ಕೆ.ಪಿ.ಟಿ.ಸಿ.ಎಲ್. ಕಾವೇರಿ ಭವನ, ಬೆಂಗಳೂರು. | 9448998889 |
| 1 | ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ | ಶ್ರೀ ಎಂ. ಪ್ರತಾಪ್, ಮುಖ್ಯ ಇಂಜಿನಿಯರ್, ಪ್ರಸರಣ ವಲಯ, ಮೈಸೂರು. | 9448380808 |
| 2 | | ಶ್ರೀ ಕೆ. ಪೂರ್ವಾಚಾರ್, ಅಧೀಕ್ಷಕ ಇಂಜಿನಿಯರ್, ಆರ್.ಟಿ. ಮತ್ತು ಆರ್ & ಡಿ. ಕೆ.ಪಿ.ಟಿ.ಸಿ.ಎಲ್, ಕಾವೇರಿ ಭವನ, ಬೆಂಗಳೂರು. | 9449596841 |
| 3 | | ಶ್ರೀ ರವಿಕಾಂತ್ ಕಾಮತ್, ಕಾರ್ಯನಿರ್ವಾಹಕ ಇಂಜಿನಿಯರ್ (ವಿ.),TL & SS, ಕಾವೂರು, ಮಂಗಳೂರು. | 9448375398 |

ಮೇಲ್ಕಂಡ ತನಿಖಾ ತಂಡಗಳಿಗೆ ನಿಯೋಜಿಸಿರುವ ಅಧಿಕಾರಿಗಳಿಗೆ ನಿಯಮಾನುಸಾರ ಪಾವತಿಸಬೇಕಾದ ಭತ್ಯೆಗಳನ್ನು ಸಂಬಂಧಪಟ್ಟ ಇಂಧನ ಇಲಾಖೆಯ ಅಧೀನ ಸಂಸ್ಥೆಗಳು ಭರಿಸತಕ್ಕದ್ದು.

**P.R. 527**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿಶ್ವನಾಥ ಪಿ. ಹಿರೇಮಠ,**
ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** 2008–09ನೇ ಸಾಲಿನಲ್ಲಿ ಕವಿನಿನಿ ಆಯೋಗವು ಹುಬ್ಬಳ್ಳಿ ಕಂಪನಿಗೆ ಹೆಚ್ಚುವರಿ ಸಹಾಯಧನವನ್ನು ನಿಗಧಿಪಡಿಸಿರುವುದನ್ನು 23.04.2015ರ ಆಯೋಗದ ಆದೇಶದಲ್ಲಿ ₹. 514.49 ಕೋಟಿಗಳ ಹೆಚ್ಚುವರಿ ಸಹಾಯಧನವನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ :** 1) ಕವಿನಿನಿ ಆಯೋಗದ ದರ ಆದೇಶ ದಿನಾಂಕ: 25.11.2009.

2) ಸರ್ಕಾರದ ಪತ್ರ ಸಂಖ್ಯೆ: ಇಎನ್ 21 ಪಿಎಸ್ಆರ್ 2014, ದಿನಾಂಕ: 19.11.2014.

3) ಕವಿನಿನಿ ಆಯೋಗದ ಆದೇಶ ದಿನಾಂಕ: 23.04.2015.

**ಪ್ರಸ್ತಾವನೆ :**

1. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ದರ ಆದೇಶದ ದಿನಾಂಕ: 25.11.2009ರಲ್ಲಿ 2008–09ಕ್ಕೆ ಸಂಬಂಧಿಸಿದಂತೆ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಹೆಚ್ಚುವರಿ ಸಹಾಯಧನ ₹. 1,139.35 ಕೋಟಿಗಳನ್ನು ಎಪಿಆರ್‌ನಲ್ಲಿ ನಿಗಧಿಪಡಿಸಿ ಆದೇಶ ಹೊರಡಿಸಿದೆ.
2. 2008–09ನೇ ಸಾಲಿಗೆ ಅನುಮೋದಿಸಿರುವ ಹೆಚ್ಚುವರಿ ಸಹಾಯಧನ ₹. 1,139.35 ಕೋಟಿಗಳನ್ನು ಸರ್ಕಾರದ ಮನವಿಯ ಮೇರೆಗೆ ಪರಿಷ್ಕರಿಸಿ ₹. 624.86 ಕೋಟಿಗಳ ಸಹಾಯಧನವೆಂದು ನಿಗಧಿಪಡಿಸಿ ಹೆಚ್ಚುವರಿ ಸಹಾಯಧನ ಅನುಮೋದಿಸಿರುವುದನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ದಿನಾಂಕ: 23.04.2015ರ ಆದೇಶದಲ್ಲಿ ಪರಿಷ್ಕರಿಸಿದೆ.
3. ಆಯೋಗದ ದರ ಆದೇಶದ ದಿನಾಂಕ: 25.11.2009ರ 2008–09ನೇ ಸಾಲಿನ ಎಪಿಆರ್‌ನಲ್ಲಿ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ಸಲ್ಲಿಸಿದ್ದ ತಾತ್ಕಾಲಿಕ (Provisional) ವಾರ್ಷಿಕ ಲೆಕ್ಕಗಳ ಆಧಾರದ ಮೇಲೆ ಎಪಿಆರ್ ಮಾಡಿದ್ದು ವಾರ್ಷಿಕ ವರದಿಯ ಪ್ರಕಾರ ಆದಾಯ ವೆಚ್ಚಗಳ ಅಂಕಿ ಸಂಖ್ಯೆಗಳಲ್ಲಿ ಹೆಚ್ಚಿನ ವ್ಯತ್ಯಾಸ ಉಂಟಾಗಿರುವುದನ್ನು ತಿಳಿಸಿ ಸಹಾಯಧನವನ್ನು ಮಾತ್ರ ಪರಿಷ್ಕರಿಸದೆ ಪೂರ್ಣವಾಗಿ ಆದಾಯ ವೆಚ್ಚಗಳನ್ನು ಆಡಿಟ್ ಲೆಕ್ಕಪತ್ರಗಳ ಪ್ರಕಾರ ಪರಿಶೀಲಿಸಿ ದಿನಾಂಕ: 23.04.2015ರ ಆಯೋಗದ ಆದೇಶದಲ್ಲಿ ಹೆಚ್ಚುವರಿ ಸಹಾಯಧನ ₹. 624.86 ಕೋಟಿಗಳೆಂದು ಪುನರ್‌ನಿಗಧಿಪಡಿಸಿದೆ.
4. ಆಯೋಗವು ದಿನಾಂಕ: 23.04.2015ರ ಆದೇಶದಲ್ಲಿ 2008–09ನೇ ಸಾಲಿಗೆ ನಿಗಧಿಪಡಿಸಿದ್ದ ಹೆಚ್ಚುವರಿ ಸಹಾಯಧನ ₹. 1,139.35 ಕೋಟಿಗಳಿಗೆ ಬದಲಾಗಿ ₹. 624.86 ಕೋಟಿಗಳೆಂದು ಪುನರ್‌ನಿಗಧಿಪಡಿಸಿದರಿಂದ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಅಧಿಕವಾಗಿ ಬಿಡುಗಡೆಯಾಗಿದ್ದ ಹೆಚ್ಚುವರಿ ಸಹಾಯಧನ ₹. 514.49 ಕೋಟಿಗಳನ್ನು ಹಿಂಪಡೆಯುವಂತೆ ಆದೇಶಿಸಿದೆ.
5. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1217 ವೆಚ್ಚ–1/2015, ದಿನಾಂಕ: 03.12.2015ರಲ್ಲಿ 2008–09ನೇ ಸಾಲಿಗೆ ಅಧಿಕವಾಗಿ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನವನ್ನು 2009–10, 2010–11 ಮತ್ತು 2014–15ನೇ ಸಾಲಿನ ಬಾಕಿ ಸಹಾಯಧನಕ್ಕೆ ಸರಿಹೊಂದಿಸಿ ಆದೇಶ ಹೊರಡಿಸಲು ಸಹಮತಿ ನೀಡಿದೆ.
6. 2008–09ನೇ ಸಾಲಿಗೆ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಅನುಮೋದಿಸಿರುವ ₹. 1,139.35 ಕೋಟಿಗಳ ಹೆಚ್ಚುವರಿ ಸಹಾಯಧನವನ್ನು 2010–11ನೇ ಸಾಲಿನಲ್ಲಿ ₹. 117.83 ಕೋಟಿಗಳು, 2011–12ನೇ ಸಾಲಿನಲ್ಲಿ ₹. 297.18 ಕೋಟಿಗಳು ಮತ್ತು 2012–13ನೇ ಸಾಲಿನಲ್ಲಿ ₹. 724.34 ಕೋಟಿಗಳು ಒಟ್ಟಾರೆಯಾಗಿ ₹. 1,139.35 ಕೋಟಿಗಳ ಹೆಚ್ಚುವರಿ ಸಹಾಯಧನವನ್ನು ಬಿಡುಗಡೆ ಮಾಡಿದೆ. ಈ ಪೈಕಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ದಿನಾಂಕ: 23.04.2015ರ ಆದೇಶದಲ್ಲಿ ಪುನರ್ ಪರಿಶೀಲಿಸಿ ಅನುಮೋದಿಸಿ ತಿಳಿಸಿರುವಂತೆ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ ₹. 514.49 ಕೋಟಿಗಳನ್ನು ಹಿಂಪಡೆದು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ 2009–10ನೇ ಸಾಲಿನಲ್ಲಿ ಬಿಡುಗಡೆ ಮಾಡಬೇಕಾಗಿದ್ದ ಬಾಕಿ ಸಹಾಯಧನ ₹. 314.37 ಕೋಟಿಗಳ, 2010–11ನೇ ಸಾಲಿನ ಬಾಕಿ ಸಹಾಯಧನ ₹. 143.95 ಕೋಟಿಗಳ ಮತ್ತು 2014–15ನೇ ಸಾಲಿನಲ್ಲಿನ ಬಾಕಿ ಸಹಾಯಧನ ₹. 148.41 ಕೋಟಿಗಳಲ್ಲಿ ₹. 56.17 ಕೋಟಿಗಳ ಬಾಕಿ ಸಹಾಯಧನಕ್ಕೆ ಹೊಂದಾಣಿಕೆ ಮಾಡಲು ಪ್ರಸ್ತಾಪಿಸಿದ್ದು, ಅದರಂತೆ ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 38 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ: 31.03.2016.**

1. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ದಿನಾಂಕ: 23.04.2015ರ ಆದೇಶದಲ್ಲಿ ಅನುಮೋದಿಸಿದಂತೆ 2008–09ನೇ ಸಾಲಿಗೆ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆಯಾಗಿರುವ ಸಹಾಯಧನದ ಮೊತ್ತ ₹. 1,139.35 ಕೋಟಿಗಳಲ್ಲಿ ಹೆಚ್ಚುವರಿಯಿಂದಾಗಿ ಬಿಡುಗಡೆಯಾಗಿರುವ ₹. 514.49 ಕೋಟಿಗಳನ್ನು ಹಿಂಪಡೆದು 2009–10ನೇ ಸಾಲಿನ ಬಾಕಿ ಸಹಾಯಧನ ₹. 314.37 ಕೋಟಿಗಳಿಗೆ, 2010–11ನೇ ಸಾಲಿನ ಬಾಕಿ ಸಹಾಯಧನ ₹. 143.95 ಕೋಟಿಗಳಿಗೆ ಮತ್ತು 2014–15ನೇ ಸಾಲಿನಲ್ಲಿನ ಬಾಕಿ ಸಹಾಯಧನ ₹. 148.41 ಕೋಟಿಗಳಲ್ಲಿ ₹. 56.17 ಕೋಟಿಗಳ ಬಾಕಿ ಸಹಾಯಧನಕ್ಕೆ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ.
2. ಈ ಆದೇಶದಿಂದ ಯಾವುದೇ ನಗದು ಬಿಡುಗಡೆ ಇರುವುದಿಲ್ಲ.
3. ಈ ಆದೇಶದಲ್ಲಿ ಹೊಂದಾಣಿಕೆ ಮೂಲಕ 2010–11, 2011–12 ಮತ್ತು 2014–15ನೇ ಸಾಲಿಗೆ ಬಿಡುಗಡೆ ಮಾಡಿರುವ ಬಾಕಿ ಸಹಾಯಧನವನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯು 2015–16ನೇ ಸಾಲಿನ ಲೆಕ್ಕಪತ್ರಗಳಲ್ಲಿ ಅಳವಡಿಸುವುದು.
4. 2012–13ನೇ ಸಾಲಿನಲ್ಲಿ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಹೊಂದಾಣಿಕೆ ಮಾಡಿ ಬಿಡುಗಡೆ ಮಾಡಿರುವ ಸಹಾಯಧನದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.
5. 2012–13ನೇ ಸಾಲಿನಲ್ಲಿ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿರುವ ಸಹಾಯಧನದಲ್ಲಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ Energy Balancing ಬಾಬ್ತುಗೆ ಹೊಂದಾಣಿಕೆ ಮಾಡಿ ಬೆವಿಕಂ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆಯಾಗಿರುವ ಮೊತ್ತದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.
6. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ 2015–16ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ 2014–15ನೇ ಸಾಲಿನ ಬಾಕಿ ಸಹಾಯಧನದಲ್ಲಿ ₹. 7.06 ಕೋಟಿಗಳಷ್ಟು ಸಹಾಯಧನವನ್ನು 2015–16ನೇ ಸಾಲಿನ ಸಹಾಯಧನದ ಬಾಬ್ತು ಎಂದು ಪರಿಗಣಿಸುವುದು.
7. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1217 ವೆಚ್ಚ–1/2015, ದಿನಾಂಕ: 03.12.2015ರಲ್ಲಿ ನೀಡಿರುವ ಸಹಮತಿಯನ್ವಯ ಬಿಡುಗಡೆ ಮಾಡಿದೆ.

P.R. 445

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ :** 2015–16ನೇ ಸಾಲಿನಲ್ಲಿ ಭಾಗ್ಯಜ್ಯೋತಿ / ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ತ್ರಿಪಕ್ಷೀಯ ಹೊಂದಾಣಿಕೆಯ (Tripartite Adjustment) ಮೂಲಕ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008, ದಿನಾಂಕ: 04.09.2008.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2013, ದಿನಾಂಕ: 17.05.2013.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015, ದಿನಾಂಕ: 29.04.2015, 18.05.2015, 01.06.2015 (TA), 04.06.2015, 01.07.2015, 03.08.2015, 01.09.2015, 15.10.2015, 03.12.2015, 05.12.2015, 10.12.2015 (TA), 23.01.2016, 04.02.2016, 01.03.2016 ಮತ್ತು 26.03.2016.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015/ಪಿ4, ದಿನಾಂಕ: 22.06.2015 (TA), 21.07.2015 (TA), 25.08.2015 (TA), 28.09.2015 (TA) ಮತ್ತು 28.10.2015 (TA).
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2015, ದಿನಾಂಕ: 22.06.2015.
6. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015/ಪಿ2, ದಿನಾಂಕ: 04.01.2016 (TA), 22.01.2016 (TA), 02.03.2016 (TA), 08.03.2016 ಮತ್ತು 17.03.2016 (TA).
7. ಸರ್ಕಾರಿ ಆದೇಶ ಸಂಖ್ಯೆ: ಇಎನ್ 38 ಪಿಎಸ್‌ಆರ್ 2015, ದಿನಾಂಕ: 31.03.2016.

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ – 1ರ ಸರ್ಕಾರಿ ಆದೇಶದಲ್ಲಿ ನಿಗಧಿಪಡಿಸಿರುವ ನಿಬಂಧನೆ ಮತ್ತು ಷರತ್ತುಗಳಿಗೊಳಪಟ್ಟು ದಿನಾಂಕ: 01.08.2008ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆಯ ಮೊತ್ತವನ್ನು ಸರ್ಕಾರದಿಂದ ಮರುಪಾವತಿ ಮಾಡುವುದಕ್ಕೆ ಅನುಮೋದನೆ ನೀಡಲಾಗಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ವಲಯದ ಕಂಪನಿಗಳಾದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿ ಹಾಗೂ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆಯನ್ನು ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನದ ಬಾಬ್ತಿಗೆ ವರ್ಷಾವಾರು ಸರಿಹೊಂದಿಸುವ ನೀತಿ ಮೊದಲಿನಿಂದಲೂ ವಾಡಿಕೆಯಲ್ಲಿದೆ.
3. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015–16ನೇ ಸಾಲಿಗೆ ₹. 7,197.16 ಕೋಟಿಗಳನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನವನ್ನಾಗಿ ಬಿಡುಗಡೆ ಮಾಡಲು ನಿಗಧಿಪಡಿಸಿದೆ.
4. ಆರ್ಥಿಕ ವರ್ಷ 2015–16ನೇ ಸಾಲಿನ ಆಯವ್ಯಯದಲ್ಲಿ ₹. 7,498.00 ಕೋಟಿಗಳ ಸಹಾಯಧನವನ್ನು ಮತ್ತು ಆರ್ಥಿಕ ವರ್ಷ 2015–16ನೇ ಸಾಲಿನ ಪೂರಕ ಅಂದಾಜುವಿನಲ್ಲಿ ₹. 645.29 ಕೋಟಿಗಳ ಹೆಚ್ಚುವರಿ ಸಹಾಯಧನವನ್ನು ಒಳಗೊಂಡಂತೆ 2015–16ನೇ ಸಾಲಿಗೆ ಒಟ್ಟಾರೆಯಾಗಿ ₹. 8,143.29 ಕೋಟಿಗಳ ಸಹಾಯಧನವನ್ನು ಒದಗಿಸಿದೆ. ಇದರಲ್ಲಿ ಮೇಲೆ ಓದಲಾದ (3), (4), (5), (6) ಮತ್ತು (7)ರ ಸರ್ಕಾರಿ ಆದೇಶಗಳಲ್ಲಿ 2015–16ನೇ ಸಾಲಿನ 31.03.2016ರವರೆಗೆ ₹. 8,034.78 ಕೋಟಿಗಳನ್ನು ಈಗಾಗಲೇ ಈ ಕೆಳಕಂಡಂತೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಲಾಗಿದೆ.

**₹. ಕೋಟಿಗಳಲ್ಲಿ**

| | |
|---|---|
| 2015–16ನೇ ಸಾಲಿನ ಏಪ್ರಿಲ್ – 2015ರಿಂದ ಮಾರ್ಚ್ – 2016ರವರೆಗೆ ಬಿಡುಗಡೆ ಮಾಡಿರುವ ಸಹಾಯಧನ | 5,403.06 |
| ದಿನಾಂಕ: 13.05.2013ರ ಅಂತ್ಯಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳ ದಂಡಸಹಿತ ಬಾಕಿ ಮೊತ್ತದಲ್ಲಿ ಬಿಡುಗಡೆ ಮಾಡಿರುವ ಹಣ | 106.54 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 100.46 |
| 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | 84.55 |
| 2007–08ರಿಂದ 2014–15ನೇ ಸಾಲಿನವರೆಗೆ ಸರ್ಕಾರದಿಂದ ವಿಸಕಂಗಳಿಗೆ ಪಾವತಿಸಬೇಕಾಗಿದ್ದ ಬಾಕಿ ಸಹಾಯಧನ ಮತ್ತು ಹೆಚ್ಚುವರಿ ಸಹಾಯಧನ ಬಾಬ್ತು | 1345.29 |
| ತ್ರಿಪಕ್ಷೀಯ ಹೊಂದಾಣಿಕೆ – 2015–16ನೇ ಸಾಲಿನ ಫೆಬ್ರವರಿ 2016ರ ಅಂತ್ಯಕ್ಕೆ ವಿದ್ಯುತ್ ತೆರಿಗೆ ವಸೂಲಿ ಮತ್ತು ರಾಜಧನ ಬಾಬ್ತು | 992.88 |
| ಸಹಾಯಧನದ ರೂಪದಲ್ಲಿ ಶ್ರೀ ಸತ್ಯ ಸಾಯಿ ಆಸ್ಪತ್ರೆಯ ವಿದ್ಯುತ್ ಬಿಲ್ಲಿನ ಬಾಬ್ತನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ. | 2.00 |
| **ಒಟ್ಟು 31.03.2016ರವರೆಗೆ ಬಿಡುಗಡೆ ಮಾಡಿದ ಸಹಾಯಧನ** | **8,034.78** |

5. 2015–16ನೇ ಸಾಲಿನಲ್ಲಿ ಫೆಬ್ರವರಿ 2016ರ ಅಂತ್ಯದವರೆಗೆ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಸರಿಹೊಂದಿಸಿರುವ ಮೊತ್ತದ ವಿವರ ಈ ಕೆಳಕಂಡಂತಿದೆ.

**₹. ಕೋಟಿಗಳಲ್ಲಿ**

| ವಿಸಕಂ | ಬೆವಿಕಂ | ಮವಿಕಂ | ಹುವಿಕಂ | ಕವಿಕಂ | ಚಾವಿಸನಿನಿ | ಕವಿಪ್ರನಿನಿ | | ಕವಿನಿನಿ | | |
|---|---|---|---|---|---|---|---|---|---|---|
| | ವಿದ್ಯುತ್ ತೆರಿಗೆ | | | | | ವಿದ್ಯುತ್ ತೆರಿಗೆ | (APDRP Principale & Interest) | ವಿದ್ಯುತ್ ತೆರಿಗೆ | ರಾಜಧನ | ಒಟ್ಟು |
| **ಏಪ್ರಿಲ್ – 15** | 63.26 | 8.15 | 8.71 | 6.90 | 8.50 | 0.00 | 0.00 | 0.57 | 3.91 | **100.00** |
| **ಮೇ – 15** | 60.47 | 9.06 | 11.88 | 8.14 | 6.80 | 0.00 | 0.00 | 0.61 | 3.04 | **100.00** |
| **ಜೂನ್ – 15** | 63.77 | 8.45 | 10.58 | 8.28 | 6.50 | 0.00 | 0.00 | 0.50 | 1.92 | **100.00** |
| **ಜುಲೈ – 15** | 58.07 | 8.55 | 9.66 | 8.83 | 5.00 | 0.00 | 0.00 | 0.54 | 3.68 | **94.33** |
| **ಆಗಸ್ಟ್ – 15** | 52.27 | 8.25 | 7.95 | 6.41 | 6.84 | 0.00 | 0.00 | 0.47 | 4.91 | **87.10** |
| **ಸೆಪ್ಟೆಂಬರ್ – 15** | 51.76 | 3.93 | 10.30 | 8.81 | 5.74 | 0.00 | 0.00 | 0.47 | 1.92 | **82.93** |
| **ಅಕ್ಟೋಬರ್ – 15** | 48.83 | 7.61 | 12.03 | 7.27 | 6.60 | 0.00 | 0.00 | 0.55 | 1.07 | **83.96** |
| **ನವೆಂಬರ್ – 15** | 49.25 | 8.09 | 10.02 | 7.09 | 7.25 | 0.00 | 0.00 | 0.50 | 0.65 | **82.85** |
| **ಡಿಸೆಂಬರ್ – 15** | 46.68 | 7.15 | 5.38 | 12.33 | 8.20 | 0.00 | 0.00 | 0.56 | 0.95 | **81.25** |
| **ಜನವರಿ – 16** | 51.94 | 9.05 | 9.66 | 8.88 | 9.85 | 0.18 | 1.10 | 0.57 | 1.81 | **93.04** |
| **ಫೆಬ್ರವರಿ – 16** | 48.20 | 9.82 | 9.80 | 10.36 | 6.50 | 0.00 | 0.00 | 0.48 | 2.26 | **87.42** |
| **ಒಟ್ಟು** | **594.50** | **88.11** | **105.97** | **93.30** | **77.78** | **0.18** | **1.10** | **5.82** | **26.12** | **992.88** |

6. 2015–16ನೇ ಸಾಲಿನ ಮಾರ್ಚ್ 2016ರ ಮಾಹೆಗೆ ವಿದ್ಯುತ್ ಸರಬರಾಜು ಕಂಪನಿಗಳು ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಮತ್ತು ಇತರೆ ಮೊತ್ತ ಹಾಗೂ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಸರ್ಕಾರಕ್ಕೆ ಪಾವತಿಸಬೇಕಾದ ವಿದ್ಯುತ್ ತೆರಿಗೆ, ರಾಜಧನದ ಮತ್ತು ಇತರೆ ಮೊತ್ತ ₹. 108.51 ಕೋಟಿಗಳನ್ನು ಈ ಕೆಳಗೆ ವಿವರಿಸಿರುವಂತೆ ತ್ರಿಪಕ್ಷೀಯ ಹೊಂದಾಣಿಕೆ (Tripartite Adjustment) ಮೂಲಕ ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನಕ್ಕೆ ಹೊಂದಾಣಿಕೆ ಮೂಲಕ ಸರಿಹೊಂದಿಸಲು ಪ್ರಸ್ತಾಪಿಸಿದೆ.

**₹. ಕೋಟಿಗಳಲ್ಲಿ**

| ಕ್ರ.ಸಂ. | ವಿಸಕಂ | ತೆರಿಗೆ | ರಾಜಧನ | ಇತರೆ | ಒಟ್ಟು |
|---|---|---|---|---|---|
| 1 | ಬೆವಿಕಂ | 24.55 | 0.00 | 18.50 | **43.05** |
| 2 | ಮವಿಕಂ | 9.15 | 0.00 | 0.55 | **9.70** |
| 3 | ಹುವಿಕಂ | 10.05 | 0.00 | 13.16 | **23.21** |
| 4 | ಕವಿಕಂ | 10.45 | 0.00 | 5.09 | **15.54** |
| 5 | ಚಾವಿಸನಿನಿ | 9.50 | 0.00 | 4.00 | **13.50** |
| 6 | ಕವಿನಿನಿ | 0.50 | 2.46 | 0.55 | **3.51** |
| **ಒಟ್ಟು** | | **64.20** | **2.46** | **41.85** | **108.51** |

7. ಮೇಲೆ ವಿವರಿಸಿದಂತೆ, ಮಾರ್ಚ್ – 2016ರ ಮಾಹೆಯ ವಿದ್ಯುತ್ ತೆರಿಗೆ, ರಾಜಧನ ಮತ್ತು ಇತರೆ ಮೊತ್ತದ ಬಾಬ್ತು ₹. 108–51 ಕೋಟಿಗಳನ್ನು ತ್ರಿಪಕ್ಷೀಯ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015/ಪಿ2, ಬೆಂಗಳೂರು, ದಿನಾಂಕ: 31.03.2016.**

1. 2015–16ನೇ ಸಾಲಿನ ಮಾರ್ಚ್ – 2016ರ ಮಾಹೆಗೆ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ, ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ, ಗ್ಯಾರಂಟಿ ಕಮಿಷನ್, ಸರ್ಕಾರ ಬಡ್ಡಿ ಸಹಿತ ಸಾಲ ಮರುಪಾವತಿಸಿರುವ ಬಾಬ್ತು **₹. 105.00 ಕೋಟಿಗಳನ್ನು (ನೂರು ಕೋಟಿ ಐದು ಲಕ್ಷ ರೂ.ಗಳು ಮಾತ್ರ)** ವಿದ್ಯುತ್ ಸರಬರಾಜು ಕಂಪನಿಗಳು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡಿರುವುದಕ್ಕಾಗಿ ಸರ್ಕಾರ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಸರಿಹೊಂದಿಸಿ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ.

**A : ESCOM's PORTION**

| ಅ: 2015–16ನೇ ಸಾಲಿನ ವಿದ್ಯುತ್ ಸರಬರಾಜು ಕಂಪನಿಗಳ ಮಾರ್ಚ್ – 2016ನೇ ಮಾಹೆಯ ಹೊಂದಾಣಿಕೆ ಮೊತ್ತ | | | | |
|---|---|---|---|---|
| | | | | ₹. ಕೋಟಿಗಳಲ್ಲಿ |
| ವೆಚ್ಚ (DEBIT) | | | ಸ್ವೀಕೃತಿ (CREDIT) | |
| ಲೆಕ್ಕ ಶೀರ್ಷಿಕೆ (Head of Account) | ಮಾರ್ಚ್–2016ನೇ ಮಾಹೆಗೆ ಸಹಾಯಧನ ಬಿಡುಗಡೆ (Subsidy Released for March-2016) | | ಲೆಕ್ಕ ಶೀರ್ಷಿಕೆ (Head of Account) | ಮಾರ್ಚ್–2016ನೇ ಮಾಹೆಗೆ ಸ್ವೀಕೃತಿ ಮೊತ್ತ (Receipts for the month of March-2016) |
| ವಿಸಕಂಗಳಿಗೆ ಸಹಾಯಧನಕ್ಕೆ ಹೊಂದಾಣಿಕೆ ಮೂಲಕ ಬಿಡುಗಡೆ (Subsidy to ESCOMs) | | | ವಿದ್ಯುತ್ ತೆರಿಗೆ ಬಾಬ್ತು ಸ್ವೀಕೃತಿ (Receipts on account of Electricity Tax) | |
| 2801–80–101–1–04–106 | | | 0043–00–101–0–01 | |
| ಬೆವಿಕಂ | 24.55 | | ಬೆವಿಕಂ | 24.55 |
| ಮವಿಕಂ | 9.15 | | ಮವಿಕಂ | 9.15 |
| ಹುವಿಕಂ | 10.05 | | ಹುವಿಕಂ | 10.05 |
| ಗುವಿಕಂ | 10.45 | | ಗುವಿಕಂ | 10.45 |
| ಚಾವಿಸನಿನಿ | 9.50 | | ಚಾವಿಸನಿನಿ | 9.50 |
| **ಮೊತ್ತ** | **63.70** | | **ಮೊತ್ತ** | **63.70** |

| | | | | ₹. ಕೋಟಿಗಳಲ್ಲಿ |
|---|---|---|---|---|
| ವೆಚ್ಚ (DEBIT) | | | ಸ್ವೀಕೃತಿ (CREDIT) | |
| ಲೆಕ್ಕ ಶೀರ್ಷಿಕೆ (Head of Account) | ಮಾರ್ಚ್–2016ನೇ ಮಾಹೆಗೆ ಸಹಾಯಧನ ಬಿಡುಗಡೆ (Subsidy Released for March-2016) | | ಲೆಕ್ಕ ಶೀರ್ಷಿಕೆ (Head of Account) | ಮಾರ್ಚ್–2016ನೇ ಮಾಹೆಗೆ ಸ್ವೀಕೃತಿ ಮೊತ್ತ (Receipts for the month of March-2016) |
| ಎಪಿಡಿಆರ್‌ಪಿ ಸಾಲಗಳ ಮೇಲೆ ಮರುಪಾವತಿಸಬೇಕಾಗಿರುವ ಬಡ್ಡಿಯನ್ನು ಸಹಾಯಧನಕ್ಕೆ ಹೊಂದಾಣಿಕೆ (Adjustment of interest payable on APDRP Loans towards subsidy) | | | ವಿಸಕಂಗಳು ಎಪಿಡಿಆರ್‌ಪಿ ಸಾಲಗಳ ಮೇಲೆ ಮರುಪಾವತಿಸಬೇಕಾಗಿರುವ ಬಡ್ಡಿ (Interest payable on APDRP Loans) | |
| 2801–80–101–1–04–106 | | | 0049–04–190–0–02 | |
| ಬೆವಿಕಂ | 3.61 | | ಬೆವಿಕಂ | 3.61 |
| ಹುವಿಕಂ | 4.71 | | ಹುವಿಕಂ | 4.71 |
| ಗುವಿಕಂ | 0.62 | | ಗುವಿಕಂ | 0.62 |
| ಚಾವಿಸನಿನಿ | 1.85 | | ಚಾವಿಸನಿನಿ | 1.85 |
| **ಮೊತ್ತ – 1** | **10.79** | | **ಮೊತ್ತ – 1** | **10.79** |
| ಪಿಎಂಜಿವೈ ಸಾಲಗಳ ಮೇಲೆ ಮರುಪಾವತಿಸಬೇಕಾಗಿರುವ ಬಡ್ಡಿಯನ್ನು ಸಹಾಯಧನಕ್ಕೆ ಹೊಂದಾಣಿಕೆ (Adjustment of interest payable on PMGY loans towards subsidy) | | | ವಿಸಕಂಗಳು ಪಿಎಂಜಿವೈ ಸಾಲಗಳ ಮೇಲೆ ಮರುಪಾವತಿಸಬೇಕಾಗಿರುವ ಬಡ್ಡಿ (Interest payable on PMGY Loans) | |
| 2801–80–101–1–04–106 | | | 0049–04–190–0–02 | |
| ಬೆವಿಕಂ | 0.09 | | ಬೆವಿಕಂ | 0.09 |
| ಮವಿಕಂ | 0.10 | | ಮವಿಕಂ | 0.10 |
| ಹುವಿಕಂ | 0.38 | | ಹುವಿಕಂ | 0.38 |
| ಗುವಿಕಂ | 0.59 | | ಗುವಿಕಂ | 0.59 |
| **ಮೊತ್ತ – 2** | **1.16** | | **ಮೊತ್ತ – 2** | **1.16** |

| | | | | |
|---|---|---|---|---|
| ಗಂಗಾಕಲ್ಯಾಣ ಸಾಲಗಳ ಮೇಲೆ ಮರುಪಾವತಿಸಬೇಕಾಗಿರುವ ಬಡ್ಡಿಯನ್ನು ಸಹಾಯಧನಕ್ಕೆ ಹೊಂದಾಣಿಕೆ (Adjustment of interest payable on Ganga Kalyana Loans towards subsidy) | | | ವಿಸಕಂಗಳು ಗಂಗಾಕಲ್ಯಾಣ ಸಾಲಗಳ ಮೇಲೆ ಮರುಪಾವತಿಸಬೇಕಾಗಿರುವ ಬಡ್ಡಿ (Interest payable on Ganga Kalayana Loans) | |
| **2801–80–101–1–04–106** | | | **0049–04–190–0–02** | |
| ಬೆವಿಕಂ | 0.54 | | ಬೆವಿಕಂ | 0.54 |
| ಮವಿಕಂ | 0.01 | | ಮವಿಕಂ | 0.01 |
| ಹುವಿಕಂ | 0.53 | | ಹುವಿಕಂ | 0.53 |
| ಗುವಿಕಂ | 0.05 | | ಗುವಿಕಂ | 0.05 |
| **ಮೊತ್ತ – 3** | **1.13** | | **ಮೊತ್ತ – 3** | **1.13** |
| ವಿದ್ಯುತ್ ವಲಯದ ಆಟೋಮೇಷನ್ ಬಾಬ್ತು ಸಾಲಗಳ ಮೇಲಿನ ಬಡ್ಡಿಯನ್ನು ಸಹಾಯಧನಕ್ಕೆ ಹೊಂದಾಣಿಕೆ (Adjustment of interest payable on Power Sector Automation loans towards subsidy) | | | ವಿದ್ಯುತ್ ವಲಯದ ಆಟೋಮೇಷನ್ ಬಾಬ್ತು ಸಾಲಗಳ ಮೇಲಿನ ಬಡ್ಡಿ (Interest payable on Power Sector Automation Loans) | |
| **2801–80–101–1–04–106** | | | **0049–04–190–0–02** | |
| ಬೆವಿಕಂ | 0.04 | | ಬೆವಿಕಂ | 0.04 |
| ಮವಿಕಂ | 0.05 | | ಮವಿಕಂ | 0.05 |
| ಹುವಿಕಂ | 0.04 | | ಹುವಿಕಂ | 0.04 |
| ಗುವಿಕಂ | 0.02 | | ಗುವಿಕಂ | 0.02 |
| **ಮೊತ್ತ – 4** | **0.15** | | **ಮೊತ್ತ – 4** | **0.15** |
| **ಮೊತ್ತ (1+2+3+4)** | **13.23** | | **ಮೊತ್ತ (1+2+3+4)** | **13.23** |

| | | | | ₹. ಕೋಟಿಗಳಲ್ಲಿ |
|---|---|---|---|---|
| ವೆಚ್ಚ (DEBIT) | | | ಸ್ವೀಕೃತಿ (CREDIT) | |
| ಲೆಕ್ಕ ಶೀರ್ಷಿಕೆ (Head of Account) | ಮಾರ್ಚ್–2016ನೇ ಮಾಹೆಗೆ ಸಹಾಯಧನ ಬಿಡುಗಡೆ (Subsidy Released for March-2016) | | ಲೆಕ್ಕ ಶೀರ್ಷಿಕೆ (Head of Account) | ಮಾರ್ಚ್–2016ನೇ ಮಾಹೆಗೆ ಸ್ವೀಕೃತಿ ಮೊತ್ತ (Receipts for the month of March-2016) |
| ಎಪಿಡಿಆರ್‌ಪಿ ಬಾಬ್ತು ಮರುಪಾವತಿಸುತ್ತಿರುವ ಸಾಲಗಳ ಅಸಲು ಮೊತ್ತವನ್ನು ಸಹಾಯಧನಕ್ಕೆ ಹೊಂದಾಣಿಕೆ (Adjustment of repayment of principle amount on APDRP Loans towards subsidy) | | | ವಿಸಕಂಗಳು ಎಪಿಡಿಆರ್‌ಪಿ ಬಾಬ್ತು ಮರುಪಾವತಿಸುತ್ತಿರುವ ಸಾಲಗಳು (Repayment of Principle amount towards APDRP Loans) | |
| **2801–80–101–1–04–106** | | | **6801–00–205–1–02** | |
| ಬೆವಿಕಂ | 4.17 | | ಬೆವಿಕಂ | 4.17 |
| ಹುವಿಕಂ | 5.44 | | ಹುವಿಕಂ | 5.44 |
| ಗುವಿಕಂ | 0.71 | | ಗುವಿಕಂ | 0.71 |
| ಚಾವಿಸನಿನಿ | 2.15 | | ಚಾವಿಸನಿನಿ | 2.15 |
| **ಮೊತ್ತ – 1** | **12.47** | | **ಮೊತ್ತ – 1** | **12.47** |

| | | | | |
|---|---|---|---|---|
| ಪಿಎಂಜಿವೈ ಬಾಬ್ತು ಮರುಪಾವತಿಸುತ್ತಿರುವ ಸಾಲಗಳ ಅಸಲು ಮೊತ್ತವನ್ನು ಸಹಾಯಧನಕ್ಕೆ ಹೊಂದಾಣಿಕೆ **(Adjustment of repayment of principle amount on PMGY loans towards subsidy)** | | | ವಿಸಕಂಗಳು ಪಿಎಂಜಿವೈ ಸಾಲಗಳ ಮೇಲೆ ಮರುಪಾವತಿಸುತ್ತಿರುವ ಸಾಲಗಳು **(Repayment of principle amount towards PMGY Loans)** | |
| **2801–80–101–1–04–106** | | | **6801–00–205–1–02** | |
| ಬೆವಿಕಂ | 0.11 | | ಬೆವಿಕಂ | 0.11 |
| ಮವಿಕಂ | 0.08 | | ಮವಿಕಂ | 0.08 |
| ಹುವಿಕಂ | 0.37 | | ಹುವಿಕಂ | 0.37 |
| ಗುವಿಕಂ | 0.54 | | ಗುವಿಕಂ | 0.54 |
| **ಮೊತ್ತ – 2** | **1.10** | | **ಮೊತ್ತ – 2** | **1.10** |
| ಗಂಗಾಕಲ್ಯಾಣ ಬಾಬ್ತು ಮರುಪಾವತಿಸುತ್ತಿರುವ ಸಾಲಗಳ ಅಸಲು ಮೊತ್ತವನ್ನು ಸಹಾಯಧನಕ್ಕೆ ಹೊಂದಾಣಿಕೆ **(Adjustment of repayment of principle amount on Ganga Kalyana Loans towards subsidy)** | | | ವಿಸಕಂಗಳು ಗಂಗಾಕಲ್ಯಾಣ ಬಾಬ್ತು ಮರುಪಾವತಿಸುತ್ತಿರುವ ಸಾಲಗಳು **(Repayment of principle amount towards Ganga Kalayana Loans)** | |
| **2801–80–101–1–04–106** | | | **6801–00–205–1–02** | |
| ಬೆವಿಕಂ | 0.06 | | ಬೆವಿಕಂ | 0.06 |
| ಮವಿಕಂ | 0.12 | | ಮವಿಕಂ | 0.12 |
| ಹುವಿಕಂ | 0.06 | | ಹುವಿಕಂ | 0.06 |
| ಗುವಿಕಂ | 0.22 | | ಗುವಿಕಂ | 0.22 |
| **ಮೊತ್ತ – 3** | **0.46** | | **ಮೊತ್ತ – 3** | **0.46** |
| ವಿದ್ಯುತ್ ವಲಯದ ಆಟೋಮೆಷನ್ ಬಾಬ್ತು ಮರುಪಾವತಿಸುತ್ತಿರುವ ಸಾಲಗಳ ಅಸಲು ಮೊತ್ತವನ್ನು ಸಹಾಯಧನಕ್ಕೆ ಹೊಂದಾಣಿಕೆ **(Adjustment of repayment of principle amount on Power Sector Automation loans towards subsidy)** | | | ವಿದ್ಯುತ್ ವಲಯದ ಆಟೋಮೆಷನ್ ಬಾಬ್ತು ಸಾಲಗಳ ಮರುಪಾವತಿ **(Repayment of Principle amount towards Power Sector Automation Loans)** | |
| **2801–80–101–1–04–106** | | | **6801–00–205–1–02** | |
| ಬೆವಿಕಂ | 0.15 | | ಬೆವಿಕಂ | 0.15 |
| ಮವಿಕಂ | 0.15 | | ಮವಿಕಂ | 0.15 |
| ಹುವಿಕಂ | 0.13 | | ಹುವಿಕಂ | 0.13 |
| ಗುವಿಕಂ | 0.13 | | ಗುವಿಕಂ | 0.13 |
| **ಮೊತ್ತ – 4** | **0.56** | | **ಮೊತ್ತ – 4** | **0.56** |
| **ಮೊತ್ತ (1+2+3+4)** | **14.59** | | **ಮೊತ್ತ (1+2+3+4)** | **14.59** |

| | | | | |
|---|---|---|---|---|
| | | | | ₹. ಕೋಟಿಗಳಲ್ಲಿ |
| ವೆಚ್ಚ (DEBIT) | | | ಸ್ವೀಕೃತಿ (CREDIT) | |
| ಲೆಕ್ಕ ಶೀರ್ಷಿಕೆ (Head of Account) | ಮಾರ್ಚ್–2016ನೇ ಮಾಹೆಗೆ ಸಹಾಯಧನ ಬಿಡುಗಡೆ (Subsidy Released for March-2016) | | ಲೆಕ್ಕ ಶೀರ್ಷಿಕೆ (Head of Account) | ಮಾರ್ಚ್–2016ನೇ ಮಾಹೆಗೆ ಸ್ವೀಕೃತಿ ಮೊತ್ತ (Receipts for the month of March-2016) |
| ಗ್ಯಾರಂಟಿ ಕಮಿಷನ್ ಬಾಬ್ತು ಪಾವತಿಸುತ್ತಿರುವ ಮೊತ್ತವನ್ನು ಸಹಾಯಧನಕ್ಕೆ ಹೊಂದಾಣಿಕೆ (Adjustment of payment of Guarantee Commission amount towards subsidy) | | | ಗ್ಯಾರಂಟಿ ಕಮಿಷನ್ (Guarantee Commission) | |
| 2801–80–101–1–04–106 | | | 0075–00–108–0–01 | |
| ಬೆವಿಕಂ | 9.73 | | ಬೆವಿಕಂ | 9.73 |
| ಮವಿಕಂ | 0.05 | | ಮವಿಕಂ | 0.05 |
| ಹುವಿಕಂ | 1.50 | | ಹುವಿಕಂ | 1.50 |
| ಗುವಿಕಂ | 2.20 | | ಗುವಿಕಂ | 2.20 |
| **ಮೊತ್ತ** | **13.48** | | **ಮೊತ್ತ** | **13.48** |
| **ಒಟ್ಟು ಮೊತ್ತ (ಅ)** | **105.00** | | **ಒಟ್ಟು ಮೊತ್ತ (ಅ)** | **105.00** |

2. 2015–16ನೇ ಸಾಲಿನ ಮಾರ್ಚ್ 2016ರ ಮಾಹೆಗೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ, ರಾಜಧನ ಮತ್ತು ಇತರೆ ಮೊತ್ತ ₹. 3.51 ಕೋಟಿಗಳನ್ನು ಸಹ ಸರ್ಕಾರವು 10ಹೆಚ್‌ಪಿರವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿರುವಂತೆ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ. ಕವಿನಿನಿ ಮತ್ತು ಗುಲ್ಬರ್ಗಾ ಸಂಸ್ಥೆಗಳು ವಿದ್ಯುತ್ ಖರೀದಿ ಅಸಲಿಗೆ ಲೆಕ್ಕೀಕರಿಸಲು ಆದೇಶಿಸಿದೆ.

**B : KPCL Portion** (₹. in Crs)

| | | | | |
|---|---|---|---|---|
| **ಅ: 2015–16ನೇ ಸಾಲಿನ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಮಾರ್ಚ್ – 2016ನೇ ಮಾಹೆಯ ತ್ರಿಪಕ್ಷೀಯ ಹೊಂದಾಣಿಕೆ (Tripartite Adjustment) ಮೊತ್ತ** | | | | |
| | | | | ₹. ಕೋಟಿಗಳಲ್ಲಿ |
| ವೆಚ್ಚ (DEBIT) | | | ಸ್ವೀಕೃತಿ (CREDIT) | |
| ಲೆಕ್ಕ ಶೀರ್ಷಿಕೆ (Head of Account) | ಮಾರ್ಚ್–2016ನೇ ಮಾಹೆಗೆ ಸಹಾಯಧನ ಬಿಡುಗಡೆ (Subsidy Released for March-2016) | | ಲೆಕ್ಕ ಶೀರ್ಷಿಕೆ (Head of Account) | ಮಾರ್ಚ್–2016ನೇ ಮಾಹೆಗೆ ಸ್ವೀಕೃತಿ ಮೊತ್ತ (Receipts for the month of March-2016) |
| ವಿಸಕಂಗಳಿಗೆ ಸಹಾಯಧನ (Subsidy to ESCOMs) | | | ರಾಜಧನ ಸ್ವೀಕೃತಿ (Royalty receivable from KPCL) | |
| 2801–80–101–1–04–106 | | | 0801–01–201–0–01 | |
| ಗುವಿಕಂ | **3.51** | | | **2.46** |
| | | | ಕವಿನಿನಿಯಿಂದ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ (Electricity Tax payable by KPCL) | |
| | | | 0043–00–101–0–01 | |
| | | | | **0.50** |
| | | | ಕವಿನಿನಿಯಿಂದ ಪಾವತಿಸಬೇಕಾಗಿರುವ ಗ್ಯಾರಂಟಿ ಕಮಿಷನ್ (Guarantee Commission receivable from KPCL) | |
| | | | 0075–00–108–0–01 | |
| | | | | **0.55** |
| **ಒಟ್ಟು ಮೊತ್ತ (ಆ)** | **3.51** | | **ಒಟ್ಟು ಮೊತ್ತ (ಆ)** | **3.51** |

3. ಲೆಕ್ಕ ಮಹಾಪರಿಶೋಧಕರು ಈ ಹೊಂದಾಣಿಕೆಗಳನ್ನು ಸಂಪೂರ್ಣವಾಗಿ ಲೆಕ್ಕಕ್ಕೆ ತೆಗೆದುಕೊಳ್ಳುವಂತೆ ಕೋರಿದೆ. **ಈ ಆದೇಶದ ಪ್ರಕಾರ ಯಾವುದೇ ನಗದು ಬಿಡುಗಡೆ ಇರುವುದಿಲ್ಲ.**
4. ಈ ಸರ್ಕಾರಿ ಆದೇಶದಲ್ಲಿ ಆದೇಶಿಸಿರುವಂತೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಮುಖ್ಯ ವಿದ್ಯುತ್ ಪರಿವೀಕ್ಷಕರು ಆ ಸಂಸ್ಥೆಗಳ ದಸ್ತಾವೇಜುಗಳಲ್ಲಿ ಸಮರ್ಪಕ ಹೊಂದಾಣಿಕೆ ಮಾಡಿಕೊಳ್ಳಲು ಆದೇಶಿಸಿದೆ.
5. 2015–16ನೇ ಸಾಲಿನ ಮಾರ್ಚ್ 2016ರ ಮಾಹೆಗೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ತೆರಿಗೆ, ರಾಜಸ್ವ ಮತ್ತು ಇತರೆ ಮೊತ್ತ ₹. 3.51 ಕೋಟಿಗಳನ್ನು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಸಹಾಯಧನವಾಗಿ ಸರಿಹೊಂದಿಸಲು ಸೂಚಿಸಿದೆ. ಈ ಮೊತ್ತವನ್ನು ವಿದ್ಯುತ್ ಖರೀದಿ ಅಸಲು ವೆಚ್ಚಕ್ಕೆ ಲೆಕ್ಕೀಕರಿಸುವುದು.
6. ಈ ಆದೇಶದಲ್ಲಿ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಿರುವ ಸಹಾಯಧನವನ್ನು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಸಹಾಯಧನದ ಬಾಬ್ತಿಗೆ ಬಿಡುಗಡೆ ಮಾಡಿದೆ ಎಂದು ಪರಿಗಣಿಸುವುದು.
7. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1466 ವೆಚ್ಚ–1/15, ದಿನಾಂಕ: 20.01.2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

**P.R. 446**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :** 3) ಸರ್ಕಾರಿ ಅಧಿಸೂಚನೆ ಸಂಖ್ಯೆ : ಡಿಇ 14 ಪಿಎಸ್‌ಆರ್ 2002, ದಿನಾಂಕ : 31–05–2002.
4) ಸರ್ಕಾರಿ ಆದೇಶ ಸಂಖ್ಯೆ : ಡಿಇ 15 ಪಿಎಸ್‌ಆರ್ 2002, ದಿನಾಂಕ : 19–12–2002.
5) ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 3 ಟಿಎಫ್‌ಪಿ 2016, ದಿನಾಂಕ : 02–04–2016.

**ಪ್ರಸ್ತಾವನೆ :**

1. ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.
2. ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.
3. 2016–17ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ₹. 550.00 ಕೋಟಿಗಳನ್ನು ಒದಗಿಸಲಾಗಿರುತ್ತದೆ.
4. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2016–17ನೇ ಸಾಲಿನ ಏಪ್ರಿಲ್ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ₹. 45.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 26 ಪಿಎಸ್‌ಆರ್ 2016, ಬೆಂಗಳೂರು, ದಿನಾಂಕ : 26–04–2016.**

1. ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2016–17ನೇ ಸಾಲಿನ ಏಪ್ರಿಲ್ 2016ರ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ₹. 45.00 ಕೋಟಿ (₹. ನಲವತ್ತೈದು ಕೋಟಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸಲ್ಲಿಸತಕ್ಕದ್ದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : FD 3 TFP 2016, ದಿನಾಂಕ: 02–04–2016ರಲ್ಲಿ ಅಪರ ಮುಖ್ಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

**P.R. 447**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## HOME SECRETARIAT

**Sub :** Constitution of State Level and District Level Coastal Security Committee.

**PREAMBLE:**

In order to improve Coastal Security and to improve co-ordination among various stake holders Government has completed Phase – I of the Coastal Security Scheme with assistance from Government of India. The State Government has established Coastal Security Police with supportive infrastructure facilities. Phase-II is currently in progress.

For Coastal Security a three tier security ring all along the coast is provided by Coastal Police, Indian Coast Guard (ICG) and Indian Navy (IN). The jurisdiction of Coastal Police extends up to 12 nautical miles in the sea (Territorial Waters) and that of ICG extends from the baseline to the limits of the Exclusive Economic Zone (FEZ), i.e., from 0 to 200 nautical miles in the sea. The area beyond 200 nautical miles (High Seas) falls within the jurisdiction of IN. Additionally, the IN complements ICG in its area of responsibility towards Coastal Security.

Important aspects concerning coastal security like constitution of State Maritime Boards, Security of Non-major Ports and Single Point Mooring, Coastal Mapping, Security of Islands, Biometric Cards and Card Readers, Colour Coding of Boats, Monitoring of Fish Landing Points, IMBL (International Maritime Boundary Line) and other threat matrix concerning Coastal Security issues need a perpetual monitoring in the coastal districts in the interest of National Security. In order to provide for an institutional arrangement to strengthen the monitoring system for coastal security from field level to apex level and to improve coastal surveillance and policing capabilities of the Coastal States/UTs, **it has been decided to establish a State Level Coastal Security Committee under the Chairmanship of Chief Secretary and District Level Coastal Security Committee under the Chairmanship of Deputy Commissioner/District Magistrate of the respective Coastal Districts.**

Hence the following Order.

**GOVERNMENT ORDER NO. HD 185 SST 2016, BANGALURU, DATED: 15.06.2016.**

Government is pleased to constitute the following State Level and District Level Coastal Security Committee with immediate effect in the interest of National Security in order to provide a formal review mechanism for Coastal Security.

**(i) STATE LEVEL COASTAL SECURITY COMMITTEE**

| | | |
|---|---|---|
| 1) | Chief Secretary to Government | Chairman |
| 2) | Additional Chief Secretary to Government, Home Department | Member Secretary |
| 3) | Director General & Inspector General of Police | Member |
| 4) | Director General of Police (Internal Security Division) | Member |
| 5) | Principal Secretary to Government, PWD. | Member |
| 6) | Principal Secretary to Government, AH & F Department | Member |
| 7) | Principal Secretary to Government, Revenue Department | Member |
| 8) | Principal Secretary to Government, Tourism | Member |
| 9) | District Magistrate, Dakshina Kannada District | Member |
| 10) | District Magistrate, Uttara Kannada District | Member |
| 11) | District Magistrate, Udupi District | Member |
| 12) | Commander of Indian Coast Guard, Karnataka | Member |
| 13) | Director of Fisheries | Member |
| 14) | Director of Ports | Member |
| 15) | Director of Tourism | Member |
| 16) | Commissioner of Customs | Member |

**(ii) DISTRICT LEVEL COASTAL SECURITY COMMITTEE**

**DAKSHINA KANNADA, UTTARA KANNADA & UDUPI DISTRICTS**

| | | |
|---|---|---|
| 1) | Deputy Commissioner / District Magistrate. | Chairman |
| 2) | Commissioner of Police, Mangaluru. | Member |
| 3) | SP, Coastal Security Police (CSP) | Member Secretary |
| 4) | Superintendent of Police | Member |
| 5) | Deputy Director, Fisheries | Member |
| 6) | Port Officer in-charge | Member |
| 7) | Deputy Director, Tourism | Member |
| 8) | Indian Coast Guard Officer | Member |
| 9) | Customs Officer | Member |
| 10) | Representative of Railways | Member |
| 11) | Nominee of Navy/NMPT/MRPL/KAIGA | Members |

**P.R. 448**
**SC – 100**

By Order and in the name of the Governor of Karnataka,

**K.PADMINI DEVI,**

Under Secretary to Government,
Home Department (Law and Order).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಬೆಂಗಳೂರಿನ ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಯ ಹೆಸರನ್ನು ಕಿದ್ವಾಯಿ ಕ್ಯಾನ್ಸರ್ ಸಂಸ್ಥೆಯೆಂದು ಮರು ನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ :** (1) ನಿರ್ದೇಶಕರು, ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೆಎಂಐಓ/ಸಿಬ್ಬಂದಿ/1/38/ 2016-17, ದಿನಾಂಕ: 08.01.2016 ಮತ್ತು 20.04.2016.

(2) ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಹಾಗೂ ಅಧ್ಯಕ್ಷರು, ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಯ ಆಡಳಿತ ಮಂಡಳಿ ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 08.01.2016ರಂದು ಜರುಗಿದ ಸಭೆಯ ಸಭಾ ನಡವಳಿಗಳು.

**ಪ್ರಸ್ತಾವನೆ :**

ಓದಲಾದ ಪತ್ರಗಳಲ್ಲಿ ನಿರ್ದೇಶಕರು, ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆ ಇವರು ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಯು ಸ್ವಾಯತ್ತ ಸಂಸ್ಥೆಯಾಗಿದ್ದು, ಈ ಸಂಸ್ಥೆಯ ಹೆಸರನ್ನು ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆ ಎಂದು ಕರ್ನಾಟಕ ಸಹಕಾರ ಸಂಘಗಳ ನೋಂದಣಿ ಕಾಯ್ದೆ ಅಡಿ ನೋಂದಾಯಿಸಲಾಗಿದೆ ಎಂದು ತಿಳಿಸುತ್ತಾ, ಬಹಳ ವರ್ಷಗಳಿಂದಲೂ ಆಂಕಾಲಜಿ ಎಂಬ ಪದವು ಸಂಸ್ಥೆಯ ಶೀರ್ಷಿಕೆಯಲ್ಲಿದ್ದರೂ ಸಹ ಸಾರ್ವಜನಿಕ ಬಳಕೆಯಲ್ಲಿ ಅಂದರೆ ಗ್ರಾಮೀಣ/ನಗರ ಸರಹದ್ದುಗಳಲ್ಲಿ ವಾಸವಿರುವ ಅಕ್ಷರಸ್ಥರು/ಅನಕ್ಷರಸ್ಥರು ಈ ಸಂಸ್ಥೆಯನ್ನು ಕ್ಯಾನ್ಸರ್ ಸಂಸ್ಥೆಯೆಂದು ಗುರುತಿಸಲು ಕಷ್ಟ ಸಾಧ್ಯವಾಗುತ್ತಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ, ದೇಶದಲ್ಲಿ ಕ್ಯಾನ್ಸರ್ ರೋಗಕ್ಕೆ ಚಿಕಿತ್ಸೆ ನೀಡುವ ಮತ್ತು ಸಂಶೋಧನೆ ಮಾಡುವ ಪ್ರಮುಖ ಸಂಸ್ಥೆಗಳು ಅಡಿಯಾರ್ ಕ್ಯಾನ್ಸರ್ ಸಂಸ್ಥೆ, ಗುಜರಾತ್ ಕ್ಯಾನ್ಸರ್ ಸಂಸ್ಥೆ ಮತ್ತು ಸಂಶೋಧನಾ ಸಂಸ್ಥೆ, ಡಾ:ಬರೂಹ ಕ್ಯಾನ್ಸರ್ ಸಂಸ್ಥೆಗಳೆಂಬ ಹೆಸರಿನಲ್ಲಿದ್ದು, ಕ್ಯಾನ್ಸರ್ ಸಂಸ್ಥೆ ಎಂಬ ಪದವು ಶ್ರೀಸಾಮಾನ್ಯನ ಭಾಷೆಯಲ್ಲಿ ಹೆಚ್ಚು ಬಳಕೆಯಲ್ಲಿರುವುದರಿಂದ ಹಾಗೂ ದೇಶದ ಇತರೆ ಕ್ಯಾನ್ಸರ್ ಸಂಸ್ಥೆಗಳ ಹೆಸರಿನೊಂದಿಗೆ ಸಾಮ್ಯತೆಯನ್ನು ಕಾಪಾಡಿಕೊಳ್ಳುವುದು ಅವಶ್ಯವಿರುತ್ತದೆ. ಈ ಹಿನ್ನೆಲೆಯಲ್ಲಿ ದಿನಾಂಕ: 08.01.2016ರಂದು ಜರುಗಿದ ಸಂಸ್ಥೆಯ ಆಡಳಿತ ಮಂಡಳಿ ಸಭೆಯಲ್ಲಿ ಬೆಂಗಳೂರಿನ "ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಯ" ಹೆಸರನ್ನು "ಕಿದ್ವಾಯಿ ಕ್ಯಾನ್ಸರ್ ಸಂಸ್ಥೆ" ಎಂದು ಮರುಪದನಾಮೀಕರಿಸಲು ನಿರ್ಣಯಿಸಲಾಗಿದೆ ಎಂದು ತಿಳಿಸಿ, ಅದರಂತೆ, ಸದರಿ ಸಂಸ್ಥೆಯ ಹೆಸರನ್ನು ಕಿದ್ವಾಯಿ ಕ್ಯಾನ್ಸರ್ ಸಂಸ್ಥೆ ಎಂದು ಬದಲಾಯಿಸಲು ಸರ್ಕಾರದ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಓದಲಾದ (2)ರ ನಡವಳಿಯನ್ವಯ ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಯ ಹೆಸರನ್ನು ಕಿದ್ವಾಯಿ ಕ್ಯಾನ್ಸರ್ ಸಂಸ್ಥೆಯೆಂದು ಬದಲಾವಣೆ ಮಾಡಲು ಆಡಳಿತ ಮಂಡಳಿ ಸಭೆಯಲ್ಲಿ ನಿರ್ಣಯಿಸಲಾಗಿದೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಬೆಂಗಳೂರಿನ ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಯ ಹೆಸರನ್ನು ಸಾರ್ವಜನಿಕ ಹಿತದೃಷ್ಠಿಯಿಂದ ಕಿದ್ವಾಯಿ ಕ್ಯಾನ್ಸರ್ ಸಂಸ್ಥೆ ಎಂದು ಮರು ನಾಮಕರಣ ಮಾಡಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 118 ಕೆವಿಎಂ 2016, ಬೆಂಗಳೂರು, ದಿನಾಂಕ: 29.06.2016.**

ಬೆಂಗಳೂರಿನ ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಯ ಹೆಸರನ್ನು ಸಾರ್ವಜನಿಕ ಹಿತದೃಷ್ಠಿಯಿಂದ ತತ್‌ಕ್ಷಣದಿಂದ ಜಾರಿಗೆ ಬರುವಂತೆ "ಕಿದ್ವಾಯಿ ಕ್ಯಾನ್ಸರ್ ಸಂಸ್ಥೆ" ಎಂದು ಮರು ನಾಮಕರಣ ಮಾಡಿ ಆದೇಶಿಸಿದೆ.

**P.R. 471**
**S.C – 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಮುರಳಿ,**

ಸರ್ಕಾರದ ಅಧೀನ ಕಾರ್ಯದರ್ಶಿ – 2 (ಪ್ರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** 2016–17ನೇ ಸಾಲಿಗೆ ರಾಜ್ಯದಲ್ಲಿರುವ ಕಾಮೆಡ್–ಕೆ ವ್ಯಾಪ್ತಿಯ ವೈದ್ಯಕೀಯ ಹಾಗೂ ದಂತ ವೈದ್ಯಕೀಯ ಕಾಲೇಜುಗಳಲ್ಲಿನ ಸ್ನಾತಕ ಕೋರ್ಸುಗಳ ಸೀಟುಗಳ ಪ್ರವೇಶ ಶುಲ್ಕವನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ವೃತ್ತಿಪರ ಕೋರ್ಸುಗಳ ಪ್ರವೇಶಾತಿಗೆ ಸಂಬಂಧಿಸಿದಂತೆ ಸೀಟು ಹಂಚಿಕೆ ಮತ್ತು ಶುಲ್ಕ ನಿಗಧಿ ಕುರಿತು ಸರ್ಕಾರ ಹಾಗೂ ಖಾಸಗಿ ಆಡಳಿತ ಮಂಡಳಿಗಳ ನಡುವೆ ಪರಸ್ಪರ ಒಡಂಬಡಿಕೆ ಮಾಡಿಕೊಳ್ಳಲು ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ: 23–06–2016ರಂದು ಜರುಗಿದ ಸಭೆಯ ನಿರ್ಣಯಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಸಭೆಯ ನಿರ್ಣಯಗಳನ್ವಯ 2016–17ನೇ ಸಾಲಿನ ಸ್ನಾತಕ ವೈದ್ಯಕೀಯ ಹಾಗೂ ದಂತ ವೈದ್ಯಕೀಯ ಕೋರ್ಸುಗಳ ಸೀಟು ಹಂಚಿಕೆ & ಶುಲ್ಕ ನಿಗಧಿಗೆ ಸಂಬಂಧಿಸಿದಂತೆ ಪರಸ್ಪರ ಒಡಂಬಡಿಕೆ ಮಾಡಿಕೊಳ್ಳುವ ಸಲುವಾಗಿ ರಾಜ್ಯದ ಖಾಸಗಿ ಕಾಲೇಜುಗಳ ಸಂಘಗಳಲ್ಲಿ ಒಂದಾದ ಕಾಮೆಡ್–ಕೆ ಯ ಅಧ್ಯಕ್ಷರು/ಪ್ರತಿನಿಧಿಗಳೊಂದಿಗೆ ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ದಿ: 23.06.2016ರಂದು ನಡೆದ ಸಭೆಯಲ್ಲಿ 2016–17ನೇ ಸಾಲಿಗೆ ಕಾಮೆಡ್–ಕೆ ವ್ಯಾಪ್ತಿಯ ವೈದ್ಯಕೀಯ ಹಾಗೂ ದಂತ ವೈದ್ಯಕೀಯ ಕಾಲೇಜುಗಳಲ್ಲಿನ ಸ್ನಾತಕ ಕೋರ್ಸುಗಳ ಸೀಟುಗಳಿಗೆ 2015–16ನೇ ಸಾಲಿನಲ್ಲಿ ನಿಗಧಿಪಡಿಸಿದ್ದ ಪ್ರವೇಶ ಶುಲ್ಕವನ್ನು ಈ ಕೆಳಗಿನಂತೆ ಪರಿಷ್ಕರಿಸಲು ತೀರ್ಮಾನಿಸಲಾಗಿರುತ್ತದೆ.

**ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ/ದಂತ ವೈದ್ಯಕೀಯ ಕಾಲೇಜುಗಳಲ್ಲಿನ (ಕಾಮೆಡ್–ಕೆ) ವೈದ್ಯಕೀಯ (MBBS)/ದಂತ ವೈದ್ಯಕೀಯ (BDS) ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ :**

ರೂ. ಗಳಲ್ಲಿ

| ಸಂಖ್ಯೆ | ಕೋರ್ಸುಗಳ ವಿವರ | ಕಾಮೆಡ್–ಕೆ ಅಭ್ಯರ್ಥಿಗಳಿಗೆ | | ಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಹಿಂದಿನ ಶುಲ್ಕ (2015–16) | ಪರಿಷ್ಕೃತ ಶುಲ್ಕ (2016–17) | ಹಿಂದಿನ ಶುಲ್ಕ (2015–16) | ಪರಿಷ್ಕೃತ ಶುಲ್ಕ (2016–17) |
| ಅ) | ಎಂಬಿಬಿಎಸ್ | 4,25,000 | 5,75,000 | 55,000 | 70,000 |
| ಆ) | ಬಿಡಿಎಸ್ | 2,75,000 | 3,90,000 | 35,000 | 45,000 |

ಮುಂದುವರಿದು, ಸರ್ಕಾರಿ ಸ್ವಾಯತ್ತ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳಲ್ಲಿನ ಸ್ನಾತಕ ಕೋರ್ಸುಗಳ ಸೀಟುಗಳಿಗೆ ಪ್ರವೇಶ ಪಡೆಯುವ ವಿದ್ಯಾರ್ಥಿಗಳಿಗೆ 2015–16ನೇ ಸಾಲಿಗೆ ನಿಗಧಿಪಡಿಸಿದ್ದ ಪ್ರವೇಶ ಶುಲ್ಕದಲ್ಲಿ ಯಾವುದೇ ಬದಲಾವಣೆ ಮಾಡದಿರಲು ತೀರ್ಮಾನಿಸಲಾಗಿದೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ರಾಜ್ಯದಲ್ಲಿನ ಕಾಮೆಡ್–ಕೆ ವ್ಯಾಪ್ತಿಯ ವೈದ್ಯಕೀಯ/ದಂತ ವೈದ್ಯಕೀಯ ಕಾಲೇಜುಗಳಲ್ಲಿನ ಸ್ನಾತಕ ಕೋರ್ಸುಗಳ ಸೀಟುಗಳ ಪ್ರವೇಶ ಶುಲ್ಕವನ್ನು 2016–17ನೇ ಸಾಲಿಗೆ ಮೇಲೆ ಪ್ರಸ್ತಾಪಿಸಿರುವಂತೆ ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 156 ಆರ್‌ಜಿಯು 2016, ಬೆಂಗಳೂರು, ದಿನಾಂಕ: 24.06.2016.**

ರಾಜ್ಯದಲ್ಲಿನ ಕಾಮೆಡ್–ಕೆ ವ್ಯಾಪ್ತಿಯ ವೈದ್ಯಕೀಯ ಹಾಗೂ ದಂತ ವೈದ್ಯಕೀಯ ಸ್ನಾತಕ ಕೋರ್ಸುಗಳ ಸೀಟುಗಳ ಪ್ರವೇಶ ಶುಲ್ಕವನ್ನು 2016–17ನೇ ಸಾಲಿಗೆ ಈ ಕೆಳಕಂಡಂತೆ ಪರಿಷ್ಕರಿಸಿ ಆದೇಶಿಸಲಾಗಿದೆ.

**ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ ಹಾಗೂ ದಂತ ವೈದ್ಯಕೀಯ ಕಾಲೇಜುಗಳಲ್ಲಿನ (ಕಾಮೆಡ್–ಕೆ) ವೈದ್ಯಕೀಯ (MBBS)/ದಂತ ವೈದ್ಯಕೀಯ (BDS) ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ :**

ರೂ. ಗಳಲ್ಲಿ

| ಸಂಖ್ಯೆ | ಕೋರ್ಸುಗಳ ವಿವರ | ಕಾಮೆಡ್–ಕೆ ಅಭ್ಯರ್ಥಿಗಳಿಗೆ | | ಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಹಿಂದಿನ ಶುಲ್ಕ (2015–16) | ಪರಿಷ್ಕೃತ ಶುಲ್ಕ (2016–17) | ಹಿಂದಿನ ಶುಲ್ಕ (2015–16) | ಪರಿಷ್ಕೃತ ಶುಲ್ಕ (2016–17) |
| ಅ) | ಎಂಬಿಬಿಎಸ್ | 4,25,000 | 5,75,000 | 55,000 | 70,000 |
| ಆ) | ಬಿಡಿಎಸ್ | 2,75,000 | 3,90,000 | 35,000 | 45,000 |

ಮುಂದುವರಿದು, ಸರ್ಕಾರಿ ಸ್ವಾಯತ್ತ ವೈದ್ಯಕೀಯ ಹಾಗೂ ದಂತ ವೈದ್ಯಕೀಯ ಕಾಲೇಜುಗಳಲ್ಲಿನ ಸ್ನಾತಕ ಕೋರ್ಸುಗಳ ಸೀಟುಗಳಿಗೆ ಪ್ರವೇಶ ಪಡೆಯುವ ವಿದ್ಯಾರ್ಥಿಗಳು ಪಾವತಿಸಬೇಕಾದ ಪ್ರವೇಶ ಶುಲ್ಕದಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲವಾದ್ದರಿಂದ 2015–16ನೇ ಸಾಲಿನಲ್ಲಿ ಕೆಳಕಂಡಂತೆ ನಿಗಧಿಪಡಿಸಿರುವ ಶುಲ್ಕವನ್ನೇ 2016–17ನೇ ಸಾಲಿನಲ್ಲಿ ಪ್ರವೇಶ ಪಡೆಯುವ ವಿದ್ಯಾರ್ಥಿಗಳಿಗೂ ನಿಗಧಿಪಡಿಸಲಾಗಿದೆ.

ರೂ. ಗಳಲ್ಲಿ

| ಸಂಖ್ಯೆ. | ಸ್ನಾತಕ ಕೋರ್ಸುಗಳ ವಿವರ | ನಿಗಧಿಪಡಿಸಿರುವ ಶುಲ್ಕ |
|---|---|---|
| 1. | ಎಂಬಿಬಿಎಸ್ | 16,700 |
| 2. | ಬಿಡಿಎಸ್ | 14,400 |

P.R. 472

S.C – 50

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಮುರಳಿ,**

ಸರ್ಕಾರದ ಅಧೀನ ಕಾರ್ಯದರ್ಶಿ – 2 (ಪ್ರ),

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವಾಲಯ

**ವಿಷಯ :** ಸಮಗ್ರ ಘನ ತ್ಯಾಜ್ಯ ನಿರ್ವಹಣೆಗಾಗಿ 3 ಆರ್ ಪರಿಸರ ಪಾರ್ಕ್ (3R Environmental Park) ನಿರ್ಮಿಸುವ ಬಗ್ಗೆ.

ರಾಜ್ಯದಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಸೇರಿದತೆ ಒಟ್ಟು 219 ನಗರ ಸ್ಥಳೀಯ ಸಂಸ್ಥೆಗಳು ಇರುತ್ತವೆ. ನಗರ ಸ್ಥಳೀಯ ಸಂಸ್ಥೆಗಳಲ್ಲಿ ದಿನಂಪ್ರತಿ ಅಂದಾಜು 8700 ಟನ್‌ಗಳಷ್ಟು ಘನ ತ್ಯಾಜ್ಯ ಉತ್ಪಾದನೆಯಾಗುತ್ತಿದ್ದು, ಅದರಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಸುಮಾರು 3500 ಟಿಪಿಡಿ ಹಾಗೂ ಉಳಿದ 218 ಸ್ಥಳೀಯ ಸಂಸ್ಥೆಗಳಿಂದ ಸುಮಾರು 5200 ಟಿಪಿಡಿ ಘನ ತ್ಯಾಜ್ಯ ಉತ್ಪಾದನೆಯಾಗುತ್ತಿದೆ.

ಕೇಂದ್ರ ಸರ್ಕಾರವು ಘನ ತ್ಯಾಜ್ಯ (ನಿರ್ವಹಣೆ ಹಾಗೂ ನಿಭಾವಣೆ) ನಿಯಮ, 2000ನ್ನು ಜಾರಿಗೊಳಿಸಿದ್ದು, ಆ ನಿಯಮಾವಳಿಗಳ ಪ್ರಕಾರ ಘನ ತ್ಯಾಜ್ಯದ ವೈಜ್ಞಾನಿಕ ನಿರ್ವಹಣೆ ಸಂಬಂಧಪಟ್ಟ ಸ್ಥಳೀಯ ಸಂಸ್ಥೆಗಳ ಜವಾಬ್ದಾರಿಯಾಗಿರುತ್ತದೆ. ಅಲ್ಲದೆ ಸದರಿ ನಿಯಮಗಳು ರಾಜ್ಯಗಳು ಅವರದೇ ಆದ ಪೌರ ಘನ ತ್ಯಾಜ್ಯ ನಿರ್ವಹಣೆ ನಿಯಮಗಳನ್ನು ರೂಪಿಸಿಕೊಳ್ಳುವುದನ್ನು ಕಡ್ಡಾಯಗೊಳಿಸಿವೆ. ಆ ಪ್ರಕಾರ, ರಾಜ್ಯ ಸರ್ಕಾರವು ಘನ ತ್ಯಾಜ್ಯ ನಿರ್ವಹಣೆ ನೀತಿಯನ್ನು ರೂಪಿಸಿದ್ದು, ಅದರಂತೆ ರಾಜ್ಯದಲ್ಲಿ ಘನ ತ್ಯಾಜ್ಯ ನಿರ್ವಹಣೆಯನ್ನು ಕಾರ್ಯಗತಗೊಳಿಸಲಾಗುತ್ತಿದೆ. ಆದರೆ, ಏರಿಕೆಯಾಗುತ್ತಿರುವ ಜನಸಂಖ್ಯೆ, ಏರಿಕೆಯ ಜೊತೆಗೆ ಅಗತ್ಯ ಮೂಲಭೂತ ಸೌಲಭ್ಯಗಳ ಕೊರತೆ ಹಾಗೂ ಸೂಕ್ತ ತಂತ್ರಜ್ಞಾನದ ಅಲಭ್ಯತೆಯಿಂದ ನಗರ ಸ್ಥಳೀಯ ಸಂಸ್ಥೆಗಳಿಗೆ ನಗರ ಘನ ತ್ಯಾಜ್ಯವನ್ನು ಸರಿಯಾದ ರೀತಿಯಲ್ಲಿ ನಿರ್ವಹಿಸಲು ಸಾಧ್ಯವಾಗಿರುವುದಿಲ್ಲ.

ಇತ್ತೀಚಿನ ವರ್ಷಗಳಲ್ಲಿ ನಮ್ಮ ರಾಜ್ಯದಲ್ಲಿ ಪೌರ ಘನ ತ್ಯಾಜ್ಯ ವಿಲೇವಾರಿಯು ಅತ್ಯಂತ ದೊಡ್ಡ ಸವಾಲಾಗಿದೆ. ಅದರಲ್ಲಿಯೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಇದು ಪರಿಸರ ಹಾಗೂ ಸಾರ್ವಜನಿಕ ಜನಜೀವನದ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ.

ಪೌರ ಘನ ತ್ಯಾಜ್ಯ ವಿಲೇವಾರಿ ದೇಶಾದಾದ್ಯಂತ್ಯವೂ ಸಹ ಬೃಹತ್ ಸವಾಲಾಗಿ ಪರಿಣಮಿಸಿದೆ. ಇದನ್ನು ಮನಗಂಡ ಕೇಂದ್ರ ಸರ್ಕಾರವು ಘನ ತ್ಯಾಜ್ಯ ನಿರ್ವಹಣೆಯನ್ನು ಸಮರ್ಪಕವಾಗಿ ನಿರ್ವಹಿಸುವ ದೃಷ್ಟಿಯಿಂದ ಘನ ತ್ಯಾಜ್ಯ (ನಿರ್ವಹಣೆ ಹಾಗೂ ನಿಭಾವಣೆ) ನಿಯಮಾವಳಿ, 2000ರ ಬದಲಾಗಿ ಘನ ತ್ಯಾಜ್ಯ ನಿರ್ವಹಣಾ ನಿಯಮಾವಳಿ, 2016ನ್ನು ಜಾರಿಗೆ ತಂದಿರುತ್ತದೆ. ಈ ಹೊಸ ನಿಯಮಾವಳಿಗಳಲ್ಲಿ ರಾಜ್ಯ ಮತ್ತು ಕೇಂದ್ರದ ವಿವಿಧ ಇಲಾಖೆ ಹಾಗೂ ಸಂಸ್ಥೆಗಳ ಕರ್ತವ್ಯಗಳನ್ನು ಸ್ಪಷ್ಟವಾಗಿ ವ್ಯಾಖ್ಯಾನಿಸಲಾಗಿದೆ. ನಿಯಮ 11ರ ಪ್ರಕಾರ, ರಾಜ್ಯ ಸರ್ಕಾರದ ನಗರಾಭಿವೃದ್ಧಿ ಇಲಾಖೆಯು ಘನ ತ್ಯಾಜ್ಯ ನಿರ್ವಹಣಾ ನೀತಿಯನ್ನು ರೂಪಿಸಬೇಕಾಗಿರುತ್ತದೆ.

ಘನ ತ್ಯಾಜ್ಯ ಸಂಸ್ಕರಣಾ ಘಟಕಗಳು ಪರಿಸರ ಮತ್ತು ಸ್ಥಳೀಯ ಜನರ ಮೇಲೆ ಪರಿಣಾಮ ಉಂಟು ಮಾಡುತ್ತವೆ ಎಂಬ ಕಾರಣದಿಂದ ಇವುಗಳ ವ್ಯವಸ್ಥಾಪನೆಗೆ ಸ್ಥಳೀಯ ಜನರಿಂದ ಪ್ರತಿರೋಧ ವ್ಯಕ್ತವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ದಿನಾಂಕ: 16.04.2016ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯಲ್ಲಿ ಘನ ತ್ಯಾಜ್ಯದ ವೈಜ್ಞಾನಿಕ ನಿರ್ವಹಣೆಗಾಗಿ ರಾಜ್ಯದಲ್ಲಿ ಎಲ್ಲಾ ರೀತಿಯ ಪರಿಸರ ಸಂರಕ್ಷಣಾ ವ್ಯವಸ್ಥೆಗಳುಳ್ಳ ಸಾರ್ವಜನಿಕ ಮತ್ತು / ಅಥವಾ ಖಾಸಗಿ "3ಆರ್ (Reduce, Reuse and Recycle) ಪರಿಸರ ಪಾರ್ಕ್"ನ್ನು ವ್ಯವಸ್ಥಾಪನೆಗೊಳಿಸುವುದು ಸೂಕ್ತವೆಂಬ ಅಭಿಪ್ರಾಯ ಮೂಡಿಬಂದಿರುತ್ತದೆ.

ರಾಜ್ಯದಲ್ಲಿ 2011ರ ಜನ ಗಣತಿ ಪ್ರಕಾರ 6.11 ಕೋಟಿ ಜನಸಂಖ್ಯೆ ಇದ್ದು, ಬೆಂಗಳೂರು ನಗರವೊಂದರಲ್ಲಿಯೇ 2032ರ ವೇಳೆಗೆ ದಿನಂಪ್ರತಿ 11600 ಮೆಟ್ರಿಕ್ ಟನ್ ಘನ ತ್ಯಾಜ್ಯ ಉತ್ಪಾದನೆಯಾಗುವುದಾಗಿ ಅಂದಾಜಿಸಲಾಗಿದೆ. ಅಂದರೆ, ಈಗಿರುವ ಘನ ತ್ಯಾಜ್ಯ ಉತ್ಪಾದನೆಯ ಸರಿಸುಮಾರು ಮೂರು ಪಟ್ಟು ಹೆಚ್ಚಳವಾಗಲಿದೆ. ಈಗಿರುವ ಮೂಲ ಸೌಲಭ್ಯಗಳಿಂದ ಅಷ್ಟು ದೊಡ್ಡ ಪ್ರಮಾಣದ ಘನ ತ್ಯಾಜ್ಯವನ್ನು ನಿರ್ವಹಿಸುವುದು ಕಷ್ಟಸಾಧ್ಯವಾಗುತ್ತದೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲಿ "3 ಪರಿಸರ ಪಾರ್ಕ್"ಗಳ ವ್ಯವಸ್ಥಾಪನೆಗೆ ಒಂದು ನೀತಿಯನ್ನು ಹೊಂದುವುದು ಅಗತ್ಯವಾಗಿರುತ್ತದೆ. ಈ ಬಗ್ಗೆ ಸಂಬಂಧಪಟ್ಟ ಇಲಾಖೆಗಳಾದ ನಗರಾಭಿವೃದ್ಧಿ ಇಲಾಖೆ, ಇಂಧನ ಇಲಾಖೆ, ಕಾರ್ಮಿಕ ಇಲಾಖೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕೆ.ಐ.ಎ.ಡಿ.ಬಿ., ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ, ಕೃಷಿ ಇಲಾಖೆ, ಕಂದಾಯ ಇಲಾಖೆ ಮತ್ತು ಆರ್ಥಿಕ ಇಲಾಖೆಗಳು 3R ಪರಿಸರ ಪಾರ್ಕ್ ಸ್ಥಾಪನೆಗೆ ತಮ್ಮ ಸಹಮತಿಯನ್ನು ವ್ಯಕ್ತಪಡಿಸಿರುತ್ತವೆ. ಅಲ್ಲದೆ ಮಾನ್ಯ ಸಚಿವ ಸಂಪುಟವೂ ಕೂಡ 3R ಪರಿಸರ ಪಾರ್ಕ್ ಸ್ಥಾಪನೆ ಬಗ್ಗೆ ತಾತ್ವಿಕ ಅನುಮೋದನೆಯನ್ನು ನೀಡಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 43 ಇಎನ್‌ಜಿ 2016, ಬೆಂಗಳೂರು, ದಿನಾಂಕ: 28.06.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಸಮಗ್ರ ಘನ ತ್ಯಾಜ್ಯ ನಿರ್ವಹಣೆಗಾಗಿ ಕೆಳಕಂಡ ಪ್ರಮುಖ ಅಂಶಗಳೊಂದಿಗೆ 3R ಪರಿಸರ ಪಾರ್ಕ್ ಸ್ಥಾಪಿಸುವ ಸಂಬಂಧ ಸರ್ಕಾರದ ತಾತ್ವಿಕ ಅನುಮೋದನೆ ನೀಡಲಾಗಿದೆ.

- ಈ 3R ಪರಿಸರ ಪಾರ್ಕ್‌ಗಳ ನೀತಿಯನ್ನು ಪ್ರಮುಖವಾಗಿ 'ಮಿತಗೊಳಿಸುವಿಕೆ', 'ಮರು ಬಳಕೆ' ಮತ್ತು 'ಪುನರ್ ಬಳಕೆ' ತತ್ವಗಳ ಆಧಾರದ ಮೇಲೆ ರೂಪಿಸಲಾಗಿದೆ.

- ಮೇಲೆ ಹೇಳಿರುವ ತತ್ವವನ್ನಾಧರಿಸಿ ಸಂಸ್ಕರಣಾ ಘಟಕಗಳಿಂದ ಶೂನ್ಯ ತ್ಯಾಜ್ಯ ವಿಲೇವಾರಿ ಗುರಿಯೊಂದಿಗೆ ರಾಜ್ಯದಲ್ಲಿ "3R" ಪರಿಸರ ಪಾರ್ಕ್‌ಗಳನ್ನು ಸ್ಥಾಪಿಸುವುದು.
- ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಕಂದಾಯ ಇಲಾಖೆ ಮತ್ತು ನಗರಾಭಿವೃದ್ಧಿ ಇಲಾಖೆಗಳ ಸಹಯೋಗದೊಂದಿಗೆ ರಾಜ್ಯದಲ್ಲಿ ಕನಿಷ್ಠ ಹತ್ತು ಸ್ಥಳಗಳಲ್ಲಿ 3ಆರ್ ಪರಿಸರ ಪಾರ್ಕ್‌ಗಳನ್ನು ನಿರ್ಮಿಸುವುದು.
- ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ರವರು ಬಿಡದಿಯಲ್ಲಿ ಸ್ಥಾಪಿಸಲಿರುವ **"ತ್ಯಾಜ್ಯದಿಂದ ಇಂಧನ"** ಘಟಕದ (Waste to Energy Plant) ಪಕ್ಕದಲ್ಲಿಯೇ 25 ಎಕರೆ ಹೆಚ್ಚಿನ ಜಾಗವನ್ನು 3R ಪರಿಸರ ಪಾರ್ಕ್‌ಗಾಗಿ ಸ್ವಾಧೀನಪಡಿಸಿಕೊಳ್ಳುವುದು.
- ಪ್ರತಿ 3R ಪರಿಸರ ಪಾರ್ಕ್‌ಗಳು ಕನಿಷ್ಠ 100 ಎಕರೆ ವಿಸ್ತೀರ್ಣವನ್ನು ಹೊಂದಿರತಕ್ಕದ್ದು ಮತ್ತು ಮುನ್ಸಿಪಲ್ ಗಡಿರೇಖೆಯಿಂದ 10 ಕಿ.ಮೀ. ಆಚೆಯಿರತಕ್ಕದ್ದು. ಈ 3R ಪಾರ್ಕ್‌ಗಳ ಸುತ್ತಲು ಕನಿಷ್ಠ 100 ಮೀ ಅಗಲದ ಮತ್ತು ಕನಿಷ್ಠ ಶೇ. 50ರಷ್ಟು ವಿಸ್ತೀರ್ಣದ 'ಬಫರ್ ಜೋನ್' ಹೊಂದಿರತಕ್ಕದ್ದು. 3R ಪಾರ್ಕ್‌ಗಳ ಸುತ್ತಲು ಸಾಕಷ್ಟು ಎತ್ತರದ ಆವರಣದ ಗೋಡೆ ಇರಬೇಕು. 'ಬಫರ್ ಜೋನ್' ಪ್ರದೇಶವನ್ನು ವರ್ಷಪೂರ್ತಿ ದಟ್ಟ ಹಸಿರು ಎಲೆ ಹೊಂದಿರುವ ಮರಗಳನ್ನು ಬೆಳೆಸಲು ಅರಣ್ಯ ಇಲಾಖೆಗೆ ವಹಿಸಿಕೊಡತಕ್ಕದ್ದು.
- ಪ್ರಸ್ತಾಪಿಸಿರುವ ಹತ್ತು 3ಆರ್ ಪರಿಸರ ಪಾರ್ಕ್‌ಗಳಲ್ಲಿ ಮೂರು ಪಾರ್ಕ್‌ಗಳನ್ನು ಬೆಂಗಳೂರು ನಗರದ ಸುತ್ತಲು 10 ಕಿ.ಮೀ. ವ್ಯಾಪ್ತಿಯಿಂದಾಚೆಗೆ ಅಭಿವೃದ್ಧಿಪಡಿಸತಕ್ಕದ್ದು ಮತ್ತು ಉಳಿದ ಏಳು ಪಾರ್ಕ್‌ಗಳನ್ನು ಇತರೆ ಸಿಟಿ ಮುನ್ಸಿಪಲ್ ಕಾರ್ಪೋರೇಷನ್‌ಗಳಲ್ಲಿ ಅಭಿವೃದ್ಧಿ ಪಡಿಸತಕ್ಕದ್ದು.
- ಈ 3ಆರ್ ಪರಿಸರ ಪಾರ್ಕ್‌ಗಳಲ್ಲಿ ತ್ಯಾಜ್ಯ ಸಂಸ್ಕರಣೆಗೆ ಅಗತ್ಯವಾದ ಉಪ ಕೈಗಾರಿಕೆಗಳು ಸೇರಿದಂತೆ ಖಾಸಗಿ ಮತ್ತು ಸರ್ಕಾರಿ ಸ್ವಾಮ್ಯದ ಸಂಸ್ಕರಣಾ ಘಟಕಗಳನ್ನು ವ್ಯವಸ್ಥಾಪನೆಗೊಳಿಸುವುದು.
- ಈ ಘಟಗಳ ಸ್ಥಾಪನೆಗೆ ಅಗತ್ಯವಿರುವ ಸೂಕ್ತವಾದ ಜಮೀನನ್ನು ಕಂದಾಯ ಇಲಾಖೆಯಿಂದ ಪಡೆಯುವುದು ಅಥವಾ ಸರ್ಕಾರಿ ಭೂಮಿ ಲಭ್ಯವಿಲ್ಲದಿದ್ದಲ್ಲಿ ಖಾಸಗಿ ಜಮೀನನ್ನು ಸ್ವಾಧೀನಪಡಿಸಿಕೊಳ್ಳುವುದು.
- ಈ 3ಆರ್ ಪರಿಸರ ಪಾರ್ಕ್‌ಗಳನ್ನು ಕರ್ನಾಟಕ ನಗರ ಮೂಲಭೂತ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ನಿಗಮವು (KUIDFC) ಅಭಿವೃದ್ಧಿಪಡಿಸಿ, ನಂತರದಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ (KIADB) ನಿರ್ವಹಣೆ ಮಾಡಿಕೊಂಡು ಮುಂದುವರಿಸುವುದು.
- ಪ್ರಸ್ತುತ ನಗರದ ಒಳಭಾಗದಲ್ಲಿರುವಂತಹ ಸಣ್ಣ ಪ್ರಮಾಣದ ಪುನರ್ ಬಳಕೆ, ವಿಂಗಡಣೆ, ಮರುಬಳಕೆ ಘಟಕಗಳನ್ನು 3ಆರ್ ಪರಿಸರ ಪಾರ್ಕ್‌ಗಳಿಗೆ ಸ್ಥಳಾಂತರಿಸುವುದು.
- 3ಆರ್ ಪರಿಸರ ಪಾರ್ಕ್‌ನಲ್ಲಿ ಸ್ಥಾಪಿತವಾಗುವ ಘಟಕಗಳ ಜೊತೆಗೆ ವಿಂಗಡಣಾ ಘಟಕ (Segregators), ತ್ಯಾಜ್ಯದಿಂದ ಇಂಧನ ಘಟಕ (Waste-to-Energy units), ಗೊಬ್ಬರ ತಯಾರಿಕಾ ಘಟಕ (Composting units), ಬಯೋಮೆತನೈಸೇಷನ್ ಘಟಕ (Biomethanisation plants), ಇನ್ಸಿನರೇಟರ್ಸ್ (Incinerators), ಬ್ರಿಕ್ವಿಟಿಂಗ್ ಘಟಕ (Briqueting plants), ಇ–ತ್ಯಾಜ್ಯ ಸಂಸ್ಕರಣಾ ಘಟಕ (E-waste processing units), ಕಾಗದ, ಪ್ಲಾಸ್ಟಿಕ್, ಗಾಜು, ರಬ್ಬರ್, ಲೋಹಗಳ ಮರು ಬಳಕೆ ಘಟಕಗಳನ್ನು ಸಹ ಒಳಗೊಂಡಿರತಕ್ಕದ್ದು.
- ತ್ಯಾಜ್ಯ ನೀರು / ಲೀಚೆಟ್ ಸಂಸ್ಕರಣಾ ಘಟಕ (Effluents, Leachate Treatment Plants)ಗಳನ್ನು ಕರ್ನಾಟಕ ನಗರ ಮೂಲಭೂತ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ನಿಗಮವು (KUIDFC) ಸ್ಥಾಪಿಸುವುದು ಹಾಗೂ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು (KIADB) ನಿರ್ವಹಣೆ ಮಾಡತಕ್ಕದ್ದು.
- ಕೇಂದ್ರ ಸರ್ಕಾರದ ನೀತಿ ಆಯೋಗಕ್ಕೆ ಗ್ರೂಪ್ ಆಫ್ ಮಿನಿಸ್ಟರ್ಸ್‌ರವರು ಸ್ವಚ್ಛ ಭಾರತ ಮಿಷನ್ ಯೋಜನೆಯಡಿಯಲ್ಲಿ ಮಾಡಿರುವ ಶಿಫಾರಸ್ಸುಗಳ ಆಧಾರದ ಮೇಲೆ ತ್ಯಾಜ್ಯ ಸಂಸ್ಕರಣಾ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳುವುದು.
- ಸ್ವಚ್ಛ ಭಾರತ ಅಭಿಯಾನದ ಪ್ರಸ್ತುತ ನೀತಿಗನುಗುಣವಾಗಿ ತ್ಯಾಜ್ಯ ಸಂಸ್ಕರಣಾ ಘಟಕಗಳಿಗೆ ಸೂಕ್ತ ಹಣಕಾಸು ರಿಯಾಯಿತಿಯನ್ನು ನೀಡುವುದು. ಮುಂದುವರೆದು PPP ಮಾದರಿಯಡಿಯಲ್ಲಿ ವ್ಯವಸ್ಥಾಪನೆಗೊಳ್ಳುವ 100 ಟಿಪಿಡಿಗೂ ಅಧಿಕ ಸಾಮರ್ಥ್ಯವುಳ್ಳ ವೇಸ್ಟ್–ಟು–ಎನರ್ಜಿ ಘಟಕಗಳಿಗೆ ಕರ್ನಾಟಕ ರಾಜ್ಯ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 4(ಜ)ರಡಿ ವಿನಾಯಿತಿ ನೀಡುವುದು.
- ಸಾವಯವ ಕೃಷಿಗೆ ಉತ್ತೇಜನ ನೀಡುವ ಸಲುವಾಗಿ 3ಆರ್ ಪರಿಸರ ಪಾರ್ಕ್‌ಗಳಲ್ಲಿ ಉತ್ಪಾದನೆಗೊಳ್ಳುವ ಸಾವಯವ ಗೊಬ್ಬರವನ್ನು ಕೃಷಿಯಲ್ಲಿ ಬಳಕೆ ಮಾಡುವುದು.
- ಕಾರ್ಮಿಕರು ಹಾಗೂ ಸ್ಥಳೀಯರ ಆರೋಗ್ಯದ ಮೇಲೆ ಉಂಟಾಗುವ ದುಷ್ಪರಿಣಾಮವನ್ನು ನಿಭಾಯಿಸಲು ಸುತ್ತಲಿನ ಪರಿಣಾಮಕ್ಕೊಳಪಡುವ ವಲಯದ ಎಲ್ಲಾ ಅರ್ಹ ವ್ಯಕ್ತಿಗಳಿಗೆ ವಿಶೇಷ ಆರೋಗ್ಯ ಮತ್ತು ಜೀವ ವಿಮೆ ಯೋಜನೆಗಳನ್ನು ರೂಪಿಸುವುದು.
- ಕೇಂದ್ರ ಸರ್ಕಾರ ಕಂಪನಿ ಅಧಿನಿಯಮ ಕಂಡಿಕೆ 135ಕ್ಕೆ ಇತ್ತೀಚಿಗೆ ಮಾಡಲಾಗಿರುವ ತಿದ್ದುಪಡಿಯಂತೆ ಕಂಪನಿಯ ನಿವ್ವಳ ಲಾಭದ ಶೇ. 2ರಷ್ಟನ್ನು ಉದ್ಯಮಗಳ ಸಾಮಾಜಿಕ ಹೊಣೆಗಾರಿಕೆ (Corporate Social Responsibility – CSR) ಚಟುವಟಿಕೆಗಳಿಗೆ ಮೀಸಲಿಡಲು ಅವಕಾಶವನ್ನು ಕಲ್ಪಿಸಲಾಗಿದೆ. 3ಆರ್ ಪರಿಸರ ಪಾರ್ಕ್‌ಗಳ ಅಭಿವೃದ್ಧಿ ಮತ್ತು ನಿರ್ವಹಣೆಗೆ ಮುಂದಾಗುವ ಉದ್ಯಮಗಳಿಗೆ ಅವಕಾಶ ನೀಡುವ ಮೂಲಕ ನಗರ ಸ್ಥಳೀಯ ಸಂಸ್ಥೆಗಳು ಸಿಎಸ್‌ಆರ್ ಮೊತ್ತದ ಸದುಪಯೋಗವನ್ನು ಪಡೆದುಕೊಳ್ಳಲು ನೀತಿಯಲ್ಲಿ ಅವಕಾಶ ಕಲ್ಪಿಸಲಾಗಿದೆ.
- ಈ 3ಆರ್ ಪರಿಸರ ಪಾರ್ಕ್‌ಗಳ ವ್ಯವಸ್ಥಾಪನೆಯ ಸಂದರ್ಭದಲ್ಲಿ ಉದ್ಭವವಾಗುವಂತಹ ಸಮಸ್ಯೆಗಳನ್ನು ನಿವಾರಿಸಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಅರಣ್ಯ, ಜೀವಿ ಪರಿಸ್ಥಿತಿ ಮತ್ತು ಪರಿಸರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು / ಪ್ರಧಾನ ಕಾರ್ಯದರ್ಶಿಗಳು / ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕಂದಾಯ ಇಲಾಖೆ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ, ಜೀವಿ ಪರಿಸ್ಥಿತಿ ಮತ್ತು ಪರಿಸರ ಮತ್ತು ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಇವರನ್ನು ಸದಸ್ಯರನ್ನಾಗಿ ಒಳಗೊಂಡ ಒಂದು ಚಾಲನಾ ಸಮಿತಿಯನ್ನು ರಚಿಸಲು ಪ್ರಸ್ತಾಪಿಸಲಾಗಿದೆ. ಈ ಚಾಲನಾ ಸಮಿತಿಯು ಅನುಷ್ಠಾನದ ಸಂದರ್ಭದಲ್ಲಿ ಉದ್ಭವವಾಗುವ ಸಮಸ್ಯೆಗಳನ್ನು ಬಗೆಹರಿಸಲು ಅಗತ್ಯವಾದ ತೀರ್ಮಾನಗಳನ್ನು ಕೈಗೊಳ್ಳಲು ಅಧಿಕಾರವನ್ನು ಹೊಂದಿರುತ್ತದೆ.

ಸಂಬಂಧಪಟ್ಟ ಇಲಾಖೆಗಳಾದ ನಗರಾಭಿವೃದ್ಧಿ, ಇಂಧನ, ಕಾರ್ಮಿಕ ಇಲಾಖೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು (KIADB), ವಾಣಿಜ್ಯ ಮತ್ತು ಕೈಗಾರಿಕೆ, ಕೃಷಿ ಇಲಾಖೆ, ಅರಣ್ಯ, ಕಂದಾಯ, ಆರ್ಥಿಕ ಇಲಾಖೆ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕರ್ನಾಟಕ ನಗರ ಮೂಲಭೂತ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ನಿಗಮ (KUIDFC)ಗಳು ಸಮಗ್ರ ಘನ ತ್ಯಾಜ್ಯ ಸಂಸ್ಕರಣೆಗಾಗಿ 3R ಪರಿಸರ ಪಾರ್ಕ್‌ಗಳನ್ನು ಸ್ಥಾಪಿಸಲು ಅಗತ್ಯ ಕ್ರಮ ಕೈಗೊಳ್ಳತಕ್ಕದ್ದು. ಕರ್ನಾಟಕ ನಗರ ಮೂಲಭೂತ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ನಿಗಮ (KUIDFC) ಯು ಈ ಬಗ್ಗೆ ಪ್ರಸ್ತಾವನೆಗಳನ್ನು ತಯಾರಿಸಿ, ಅರಣ್ಯ, ಜೀವಿ ಪರಿಸ್ಥಿತಿ ಮತ್ತು ಪರಿಸರ ಇಲಾಖೆಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಅಂದಾನಯ್ಯ ಮಠದ,**

ಸರ್ಕಾರದ ಅಧೀನ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ),

ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ.

**FOREST, ECOLOGY AND ENVIRONMENT SECRETARIAT**

Sub : Establishment of 3 R Environmental Parks for Integrated Solid Waste Management - reg.

**PREAMBLE:**

There are 219 Urban Local Bodies in the state, including Bruhath Bengaluru Mahanagara Palike. About 8700 tonnes per day (TPD) of Municipal Solid Waste is generated in the Urban Local Bodies of which about 3500 TPD is from BBMP and remaining quantity of around 5200 TPD is generated from 218 ULBs.

The Central Govt notified the Municipal Solid Waste (Management & Handling) Rules, 2000, under which scientific management of solid waste is the reponsibility of concerned ULBs. Further, the rules mandated the States to have their own Municipal Solid Waste (MSW) policy and our State already has the policy and waste is being managed accordingly. However, due to increasing urban population coupled with insufficient infrastructure and appropriate technology, the ULBs are not able to handle MSW in an appropriate manner.

In the recent past, Municipal Solid Waste (MSW) disposal has become a very big challenge in the State, specially so in BBMP area and it is adversely impacting the environment and also on the lives of the general public.

MSW disposal is a very big challenge in the country as well. Taking this into consideration, and to manage the waste in an effective manner, the Central Government has notified a new set of rules called; the Solid Waste Management Rules, 2016 in place of the Municipal Solid Waste (Management & Handling) Rules, 2000. Under these new rules, duties of different departments and agencies both at the Centre and the State have been clearly defined As per Rule 11, the State Government in the Urban Development Department is to frame a Solid Waste Management Policy.

There has been resistance from local people to establish solid waste processing units, as these units would have environmental impacts on local people. Under these circumstances, it is opined during the meeting held on 16.04.2016 under the Chairmanship of Chief Secretary to Government that it will be appropriate to establish 3 R (Reduce, Reuse and Recycle) Environment Parks in the State wherein all private and/or public Waste processing units would be located with all environmental safeguards put in place.

As per 2011 - census, the State has 6.11 crore population and keeping the growth of population, by 2032, Bengaluru alone would generate around 11600, TPD of solid waste. It means, there win be a three fold increase of waste generation from the present level. With the existing infrastructure, it would be difficult to manage such huge quantities.

Under the above circumstances, there is a need to have policy to establish "3R Environment Parks" in the State. Concerned Departments like Urban Development, Energy, Labour, Rural Development and Panchayath Raj Department, KIADB, Commerce and Industries, Agriculture, Revenue and Finance Department have given their concurrence to it. The Hon'ble Cabinet have accorded in Principle approval for establishment of 3R Environmental Parks for integrated waste processing.

Hence, the following order.

**GOVERNMENT ORDER NO. FEE 43 ENG 2016, BANGALURU DATED: 28.06.2016.**

In view of the facts traversed in the preamble, in principle approval of the Government is accorded for establishing 3R Environmental Parks for integrated waste processing, with the following salient points.

- These 3R Environmental parks are established based on the principles of Reduce, Reuse and Recycle.
- Based on the above principles, these 3 R Environmental parks are established with an aim to have Zero Disposal from processing units in the State.
- It is proposed to establish atleast ten 3R Parks in the- state in coordination with Department of Forest, Environment and Ecology, Revenue Department and Urban Development Departments.
- Since Karnataka Power Corporation has proposed-to set up Waste-to-Energy Plant in Bidadi, an additional 25 .acres, will be acquired around it for 3R Park.

- Every 3R Park shall have atleast 100 acres beyond a radius of 10km from the municipal boundary. These 3R Parks shall have buffer of atleast 100 meter width all round with atleast 50% of the area. These 3R Parks shall have all round compound wall of sufficient height. The buffer Zone area shall be earmarked to the Forest Department to establish plantation with trees having dense green foliage round the year.
- Out of the proposed ten 3 R Environmental Parks, three parks shall be developed around Bengaluru beyond 10 km radius and remaining seven parks shall be developed in other CMCs.
- In these 3 R Environmental parks, public and private waste processing units shall be established including allied industries which are integral for waste processing.
- Suitable land for these plants will be obtained from Revenue Department or if Government lands are not available then by acquisition of private land.
- These 3R Environmental Parks shall be developed by KUIDFC and maintained by KIADB.
- Small scale Recycling, Segregating, Reuse units that are presently located within the city shall be relocated to these Parks.
- Segregators, Waste-to- Energy units, Composting units, Biomethanisation plants, Incinerators, Briqueting plants, E-waste processing units, Paper, Plastic, Glass, Rubber, Metal recycling units win be among the units that can be set in these Parks.
- Effluents Leachate Treatment Plants win be established by KUIDFC and maintained by KIADB.
- Selection of Waste processing Technology may be based on the recommendations in the Report of Group of Ministers on Swatch Bharath Mission to NITI Aayog.
- Suitable financial concessions would be extended to waste processing units as per Swatch Bharat Mission existing policy. Further, 4 (g) exemption under KTTP Act, 1999 may be given for Waste to Energy units with more than 100 TPD capacity established under PPP Model.
- The compost generated in the 3R Environmental Parks will be used for agriculture in order to encourage organic fanning.
- To address the issue of impacts on health of labourers and local .peoples, special health and life insurance scheme are formulated to all eligible persons in the surrounding impact zone.
- By recent amendment to Section 135 of the Company Act, provision has been made to earmark 2 per cent of net profit of the company towards Corporate Social Responsibility (CSR) activities. In case of any company coming forward to develop and operate these 3 R Environment Parks, provision has been made in the policy to harness CSR funds by ULBs by facilitating such private companies.
- In order to resolve issues in establishing 3 R Environment Parks, it is proposed to constitute Steering Committee under the chairmanship of Additional Chief Secretary, FEE Department with ACS/Principal Secretaries/Secretaries of Urban Development Department, Rural Development and Panchayat Raj Department, Revenue Department, Commerce and Industries Department, Ecology and Environment and Member Secretary, Karnataka State Pollution Control Board as members. This Steering Committee is empowered to take decisions to resolve issues which may arise during the implementation.

Concerned Departments like Urban Development, Energy, Labour, Rural Development and Panchayath Raj Department, KIADB, Commerce and Industries, Agriculture, Forest, Revenue and Finance Department, Karnataka State Pollution Control Board and KUIDFC should take action regarding Establishment of 3R Environmental Parks for integrated waste processing. KUIDFC shall prepare proposals' for establishment of 3R Environmental Parks and sublmit to Forest, Ecology and Environment Department.

**P.R. 473**
**SC – 100**

By Order and in the name of the Governor of Karnataka
**ANDANAYYA MATHAD,**
Under Secretary to Government,
(Ecology and Environment),
Forest, Ecology and Environment Dept.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಿಆಸು (ಇ–ಆಡಳಿತ) ಇಲಾಖೆಗೆ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯು 2016, ದಿನಾಂಕ: 14.03.2016.

2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 88 ಸೇಲೋಯು 2016, ದಿನಾಂಕ: 22.06.2016

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿ:14.03.2016ರ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿ:22.06.2016ರ ಆದೇಶದಲ್ಲಿ, ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿ:14.03.2016ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ದಿ:22.06.2016ರ ಆದೇಶದ ಆದೇಶ ಭಾಗದ ಕಂಡಿಕೆ 1(1)ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಎಲ್ಲಾ ಇಲಾಖೆಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದ್ದೆಂದೂ ಹಾಗೂ ಆಯಾ ಇಲಾಖೆಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ / ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿಗಳ ನಂತರದ (officer next in seniority) ಅಧಿಕಾರಿಯನ್ನು ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿರುತ್ತದೆ.

ಅದರಂತೆ ಪರಿಶೀಲಿಸಿ, ಸಿಆಸು (ಇ–ಆಡಳಿತ) ಇಲಾಖೆಗೆ ಸಂಬಂಧಿಸಿದಂತೆ, ಸಿ.ಇ.ಓ, ಸಿಇಜಿ ಮತ್ತು ನಿರ್ದೇಶಕರು, ಇಡಿಸಿಎಸ್ ಸಂಸ್ಥೆಗಳಿಗೆ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 70 ಇಆಇ 2016, ಬೆಂಗಳೂರು, ದಿ: 04.07.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸರ್ಕಾರದ ಸಚಿವಾಲಯದ ಸಿಆಸು (ಇ–ಆಡಳಿತ) ಇಲಾಖೆ, ಸಿ.ಇ.ಓ, ಸಿಇಜಿ ಮತ್ತು ನಿರ್ದೇಶಕರು, ಇಡಿಸಿಎಸ್ ಸಂಸ್ಥೆಗಳಿಗೆ ಸಂಬಂಧಿಸಿದಂತೆ, ಸರ್ಕಾರದ ಜಂಟಿ ಕಾರ್ಯದರ್ಶಿ, ಇವರನ್ನು ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

**P.R – 506**
**S.C - 200**

ಕರ್ನಾಟಕ ರಾಜ್ಯಪಾಲರ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ,
**(ಎ.ವಿ. ಶೈಲಜ),**
ಪೀಠಾಧಿಕಾರಿ–1,
ಸಿಆಸು (ಇ–ಆಡಳಿತ) ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಧಾರವಾಡದಲ್ಲಿ ಸ್ಥಾಪಿಸಲಾಗುವ ಇಂಡಿಯನ್ ಇನ್ಸಿಟ್ಯೂಟ್ ಆಫ್ ಟೆಕ್ನಾಲಜಿ (ಐ.ಐ.ಟಿ) ಸಂಸ್ಥೆಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ವಶದಲ್ಲಿರುವ ಜಮೀನು ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :** ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 012 ಟಿಇಸಿ 2011, ದಿನಾಂಕ: 18–07–2016.

**ಪ್ರಸ್ತಾವನೆ :**

ಕೇಂದ್ರ ಸರ್ಕಾರವು 2015–16ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ರಾಜ್ಯಕ್ಕೆ ಇಂಡಿಯನ್ ಇನ್ಸಿಟ್ಯೂಟ್ ಆಫ್ ಟೆಕ್ನಾಲಜಿ (ಐ.ಐ.ಟಿ) ಸಂಸ್ಥೆಯನ್ನು ಮಂಜೂರು ಮಾಡಿ ಘೋಷಿಸಿರುತ್ತದೆ. ಧಾರವಾಡ ಜಿಲ್ಲೆಯ ಮಮ್ಮಿಗಟ್ಟಿ ಕೈಗಾರಿಕಾ ಪ್ರದೇಶಕ್ಕೆ ಹೊಂದಿಕೊಂಡಿರುವ ಹಾಗೂ ಪ್ರಸ್ತುತ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಸ್ವಾಧೀನದಲ್ಲಿರುವ ಕೆಲಗೇರಿ ಗ್ರಾಮದ ವಿವಿಧ ಸರ್ವೆ ನಂಬರುಗಳಲ್ಲಿನ ಅಂದಾಜು 470 ಎಕರೆ ಪ್ರದೇಶದಲ್ಲಿ ಐ.ಐ.ಟಿ ಸಂಸ್ಥೆಯನ್ನು ಸ್ಥಾಪಿಸಲು ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯವು ದಿನಾಂಕ: 25.05.2016ರಂದು ಅನುಮೋದನೆ ನೀಡಿರುತ್ತದೆ.

ಸದರಿ ಪ್ರದೇಶವನ್ನು ಉನ್ನತ ಶಿಕ್ಷಣ ಇಲಾಖೆಗೆ ಹಸ್ತಾಂತರಿಸಲು ಮತ್ತು ಈ ಜಮೀನಿನ ಭೂಸ್ವಾಧೀನದ ಸಂಬಂಧವಾಗಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ವೆಚ್ಚ ಮಾಡಿರುವ ಮೊತ್ತವನ್ನು (ಲಾಭಾಂಶವಿಲ್ಲದೆ) ಉನ್ನತ ಶಿಕ್ಷಣ ಇಲಾಖೆ / ರಾಜ್ಯ ಸರ್ಕಾರವು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ಪಾವತಿಸಲು ದಿನಾಂಕ: 18.03.2016ರಂದು ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಪ್ರವಾಸೋದ್ಯಮ ಸಚಿವರು ನಡೆಸಿದ ಸಭೆಯಲ್ಲಿ ನಿರ್ಣಯಿಸಲಾಗಿದೆ.

ಧಾರವಾಡ ಜಿಲ್ಲೆಯ ಕೆಲಗೇರಿ ಗ್ರಾಮದ, ಪ್ರಸ್ತುತ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಸ್ವಾಧೀನದಲ್ಲಿರುವ, 470 ಎಕರೆ ಜಮೀನನ್ನು ಐ.ಐ.ಟಿ. ಸಂಸ್ಥೆಯ ಸ್ಥಾಪನೆಗಾಗಿ ಮಂಡಳಿಯು ಉನ್ನತ ಶಿಕ್ಷಣ ಇಲಾಖೆಗೆ ಹಸ್ತಾಂತರಿಸಲು ಹಾಗೂ ಈ ಜಮೀನಿನ ಭೂಸ್ವಾಧೀನದ ಸಂಬಂಧವಾಗಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ವೆಚ್ಚವಾಗಿರುವ ಲಾಭಾಂಶವಿಲ್ಲದ ಸಂಪೂರ್ಣ ಮೊತ್ತವನ್ನು ಹಿಂಬರಿಸಲು ಆರ್ಥಿಕ ಇಲಾಖೆಗೆ ನಿರ್ದೇಶನ ನೀಡಲು ದಿನಾಂಕ: 13.07.2016ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ನಿರ್ಣಯಿಸಲಾಗಿದೆ.

ಅದರಂತೆ, ಧಾರವಾಡ ಜಿಲ್ಲೆಯ ಕೆಲಗೇರಿ ಗ್ರಾಮದ, ಪ್ರಸ್ತುತ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಸ್ವಾಧೀನದಲ್ಲಿರುವ, 470 ಎಕರೆ ಜಮೀನನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಉನ್ನತ ಶಿಕ್ಷಣ ಇಲಾಖೆಗೆ ಹಸ್ತಾಂತರಿಸಲು ಸೂಕ್ತ ಆದೇಶ ಹೊರಡಿಸುವಂತೆ ಮೇಲೆ ಓದಲಾದ ದಿನಾಂಕ: 18.07.2016ರ ಅನಧಿಕೃತ ಟಿಪ್ಪಣಿಯಲ್ಲಿ ಉನ್ನತ ಶಿಕ್ಷಣ ಇಲಾಖೆಯು ಕೋರಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 5 ಎಸ್‌ಪಿಕ್ಯೂ 2016, ಬೆಂಗಳೂರು, ದಿನಾಂಕ 21.07.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ಕೇಂದ್ರ ಸರ್ಕಾರವು ನೀಡಿರುವ ಅನುಮೋದನೆ ಮೇರೆಗೆ ರಾಜ್ಯದಲ್ಲಿ ಇಂಡಿಯನ್ ಇನ್ಸಿಟ್ಯೂಟ್ ಆಫ್ ಟೆಕ್ನಾಲಜಿ (ಐ.ಐ.ಟಿ) ಸಂಸ್ಥೆಯನ್ನು ಸ್ಥಾಪಿಸುವ ಸಲುವಾಗಿ ಧಾರವಾಡ ಜಿಲ್ಲೆಯ ಮಮ್ಮಿಗಟ್ಟಿ ಕೈಗಾರಿಕಾ ಪ್ರದೇಶಕ್ಕೆ ಹೊಂದಿಕೊಂಡಿರುವ ಕೆಲಗೇರಿ ಗ್ರಾಮದ, ಪ್ರಸ್ತುತ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಸ್ವಾಧೀನದಲ್ಲಿರುವ, ವಿವಿಧ ಸರ್ವೆ ನಂಬರುಗಳಲ್ಲಿನ 470 ಎಕರೆ ಜಮೀನನ್ನು ಉನ್ನತ ಶಿಕ್ಷಣ ಇಲಾಖೆಗೆ ತಕ್ಷಣವೇ ಹಸ್ತಾಂತರಿಸಲು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ಆದೇಶಿಸಿದೆ.

ಜಮೀನು ಹಸ್ತಾಂತರಿಸಲು ಅಗತ್ಯವಿರುವ ಕ್ರಮಗಳನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ನಿಯಮಾನುಸಾರ ತಕ್ಷಣವೇ ಕೈಗೊಳ್ಳತಕ್ಕದ್ದು.

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ವಶದಲ್ಲಿರುವ ಧಾರವಾಡ ಜಿಲ್ಲೆಯ ಕೆಲಗೇರಿ ಗ್ರಾಮದ ವಿವಿಧ ಸರ್ವೆ ನಂಬರುಗಳಲ್ಲಿನ 470 ಎಕರೆ ಜಮೀನಿನ ಭೂಸ್ವಾಧೀನದ ಸಂಬಂಧವಾಗಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ವೆಚ್ಚವಾಗಿರುವ ಲಾಭಾಂಶವಿಲ್ಲದ ಸಂಪೂರ್ಣ ಮೊತ್ತವನ್ನು ಹಿಂಬರಿಸುವ ಕುರಿತು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ದಾಖಲೆ ಪ್ರತಿಗಳ ಸಹಿತ ಸೂಕ್ತ ಪ್ರಸ್ತಾವನೆಯನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗೆ ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ಉನ್ನತ ಶಿಕ್ಷಣ ಇಲಾಖೆಯ ಸಚಿವ ಸಂಪುಟ ಟಿಪ್ಪಣಿ ಸಂಖ್ಯೆ: ಇಡಿ 012 ಟಿಇಸಿ 2011 ರಲ್ಲಿನ ಪ್ರಸ್ತಾವನೆಗೆ ದಿನಾಂಕ: 13.07.2016ರಂದು ನಡೆದ ಸಚಿವ ಸಂಪುಟದ ಸಭೆಯು ನೀಡಿದ ಅನುಮೋದನೆ ಮೇರೆಗೆ ಹೊರಡಿಸಲಾಗಿದೆ.

**P.R. – 534**
**S.C. – 100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ,
**ಎನ್. ಕುಮಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ) [ಪ್ರ],
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## INFRASTRUCTURE DEVELOPMENT SECRETARIAT

**Subject :** Extension of Concession on the MoU dated: 06.10.2005 in respect of Mysore Airport – reg.

**Read :**

1. Memorandum of Understanding (MoU) dated: 06.10.2005 between Government of Karnataka and Airports Authority of India.
2. Letter No. AAI/04/19/211-ARII(P)/252, dated: 17.06.2015 from the General Manager (Planning), Airports Authority of India, Government of India, New Delhi.
3. Letter No. AAI/04/19/211-ARII(P)/226, dated: 20.11.2015 from the General Manager (Planning), Airports Authority of India, Government of India, New Delhi.
4. Proceedings of the High Level Committee meeting held on 26.2.2016 under the Chairmanship of Chief Secretary, Government of Karnataka.

**Preamble :**

Mysore Airport belongs to the Airports Authority of India. As decided by the State Cabinet on 13.01.2005, a Memorandum of Understanding (MoU) read at Sl no. 1 above was signed on 06/10/2005 between Government of Karnataka and Airports Authority of India for the development of Mysore Airport. As per this MoU the Airport has been developed for operation of ATR type of Aircrafts and became operational since 1st October 2010. As per the MOU Clause 2(ii) free electricity and water and as per Clause 2(iv) exemption from Local Taxes (property tax and municipal tax) should be provided by State Government for a period of 5 years commencing from the date of operationalisation of the Airport to minimize operational losses. The electricity charges amounting to Rs. 2,28,23,381.00 have been paid by the State Government from the date of operationalisation i.e., 01-10-2010 for a period of 5 years till 30.09.2015.

The General Manager (Planning) in his letter dated: 17.06.2015 (read at Sl. No. 2 above) had requested for extension of the concessions stipulated in Clause 2(ii) and 2(iv) / & of the MoU for a further period of 5 years from 01.10.2015 stating that there are no scheduled operations of airlines and due to this, Airports Authority of India is incurring huge losses. This issue was examined by the Government and during that time as there was an agreement with Air India and Tourism Department for operation of scheduled flights from Mysore Airport with financial support from the State Government through the Tourism Department, the request of Airports Authority of India for extension of the concession was not considered and the same was communicated to Airports Authority of India.

Further, General Manager (Planning), Airports Authority of India vide letter dated: 20.11.2015 (read at Sl. No. 3 above), again requested to reconsider the decision of the Government for extending the concessions, as Air India had discontinued the scheduled operations by that time and stated that due to this Airports Authority of India is incurring huge losses. This issue was further examined by the Government. Hence this order.

**GOVERNMENT ORDER NO. IDD 125 DIA 2015, BENGALURU DATED: 21.06.2016.**

After careful examination of the proposal, sanction of the Government is accorded to extend the concessions under clause 2(ii) and 2(iv) of the Memorandum of Understanding (MoU) signed on 06.10.2005 between Government of Karnataka and Airports Authority of India for a further period of 5 years commencing from 01.10.2015.

This order is issued as per the delegation of financial powers to Principal Secretaries/Secretaries to Government vide G.O. No. FD 03 TFP 2016, dated: 02.04.2016 and with the concurrence of F.D Note No. FD 144 Exp-1/2016, dated: 29.04.2016.

**P.R. 474**
**SC – 50**

By Order and in the name of the Governor of Karnataka
**ROBIN VANARAJ. J**
Under Secretary to Government,
Infrastructure Development Department.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** 2016–17ನೇ ಸಾಲಿನಲ್ಲಿ ಆಯವ್ಯಯದ ಭಾಷಣದಲ್ಲಿ ಘೋಷಿಸಿದಂತೆ, ಕೈಗಾರಿಕೆಗಳಿಗೆ ಜಮೀನು ಕಳೆದುಕೊಂಡವರಿಗೆ ಮತ್ತು ಸ್ಥಳೀಯ ಗ್ರಾಮೀಣ ಯುವ ಜನತೆಗೆ ಉದ್ಯೋಗ ಕೌಶಲ್ಯಗಳನ್ನು ಹೆಚ್ಚಿಸಿ, ಸ್ಥಳೀಯ ಕೈಗಾರಿಕೆಗಳಲ್ಲಿಯೇ ಉದ್ಯೋಗ ತರಬೇತಿ ನೀಡಿ, ಉದ್ಯೋಗ ಒದಗಿಸುವ ಕುರಿತು.

**ಓದಲಾಗಿದೆ :** ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪತ್ರ ಸಂ: ಜಿಕೈಕೇ/ಸಿ1/ಭೂಮಿ–ಉದ್ಯೋಗ/2016–17, ದಿನಾಂಕ: 15.04.2016 ಮತ್ತು 12.05.2016.

**ಪ್ರಸ್ತಾವನೆ :**

ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿ, ಮಾನ್ಯ ಮುಖ್ಯಮಂತ್ರಿಯವರು 2016–17ನೇ ಸಾಲಿನ ಆಯವ್ಯಯದ ಭಾಷಣದ ಕಂಡಿಕೆ–373ರಲ್ಲಿ "ಕೈಗಾರಿಕೆಗಳಿಗೆ ಜಮೀನು ಕಳೆದುಕೊಂಡವರಿಗೆ ಮತ್ತು ಸ್ಥಳೀಯ ಗ್ರಾಮೀಣ ಯುವ ಜನತೆಗೆ ಉದ್ಯೋಗ ಕೌಶಲ್ಯಗಳನ್ನು ಹೆಚ್ಚಿಸಿ, ಸ್ಥಳೀಯ ಕೈಗಾರಿಕೆಗಳಲ್ಲಿಯೇ ಉದ್ಯೋಗ ತರಬೇತಿ ನೀಡಿ, ಉದ್ಯೋಗ ಒದಗಿಸಲಾಗುವುದೆಂದು ಪ್ರಸ್ತಾಪಿಸಿರುವುದರಿಂದ, ಕೈಗಾರಿಕಾ ಉದ್ದೇಶಕ್ಕಾಗಿ ಕೆ.ಐ.ಎ.ಡಿ.ಬಿ. ಮೂಲಕ ಸ್ವಾಧೀನ ಪಡಿಸಿಕೊಂಡ ಜಮೀನಿನ ಭೂ ಮಾಲಿಕರು / ಕುಟುಂಬ ಸದಸ್ಯರುಗಳಿಗೆ ಹಾಗೂ ಗ್ರಾಮೀಣ ಯುವ ಜನರಿಗೆ ಸ್ಥಳೀಯ ಕೈಗಾರಿಕೆಗಳ ಕಾರ್ಯಸ್ಥಳಗಳಲ್ಲಿಯೇ ಉದ್ಯೋಗ ತರಬೇತಿ ನೀಡಿ, ಉದ್ಯೋಗ ಒದಗಿಸಲು ತಿಳಿಸಿರುವ ತರಬೇತಿಯು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ವತಿಯಿಂದ ಕೌಶಲ್ಯಭಿವೃದ್ಧಿ ತರಬೇತಿ ಕಾರ್ಯಕ್ರಮಗಳಡಿ ಲೆಕ್ಕಶೀರ್ಷಿಕೆ 2851–00–102–0–69ರಡಿ ಅನುಷ್ಠಾನಗೊಳಿಸಲು ಮಾರ್ಗಸೂಚಿಯನ್ನು ತಯಾರಿಸಿ ಸರ್ಕಾರಕ್ಕೆ ಸಲ್ಲಿಸಿ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

2016–17ನೇ ಸಾಲಿನ ಆಯವ್ಯಯದ "ತಾಂತ್ರಿಕ ಸಂಸ್ಥೆಗಳಿಗೆ ತರಬೇತಿಗಾಗಿ ನೆರವು" ಯೋಜನೆಯ ಲೆಕ್ಕಶೀರ್ಷಿಕೆ 2851–00–102–0–69ರಡಿ ಆಯವ್ಯಯ ಭಾಷಣದ ಕಂಡಿಕೆ–373ಕ್ಕೆ ಸಂಬಂಧಿಸಿದಂತೆ, ಕೌಶಲ್ಯಭಿವೃದ್ಧಿ ತರಬೇತಿ ಕಾರ್ಯಕ್ರಮವನ್ನು ಇಲಾಖಾ ವತಿಯಿಂದ ಅನುಷ್ಠಾನಗೊಳಿಸಲು ಸಲ್ಲಿಸಿರುವ ಮಾರ್ಗಸೂಚಿಗಳಿಗೆ ಅನುಮೋದನೆ ನೀಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 30 ಸಪ್ರಕೈ 2016, ಬೆಂಗಳೂರು, ದಿನಾಂಕ: 08.06.2016.**

2016–17ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ – 373ರಲ್ಲಿ ಘೋಷಿಸಿರುವಂತೆ ಕೈಗಾರಿಕೆಗಳಿಗೆ ಜಮೀನು ಕಳೆದುಕೊಂಡವರಿಗೆ ಮತ್ತು ಸ್ಥಳೀಯ ಗ್ರಾಮೀಣ ಯುವ ಜನತೆಗೆ ಉದ್ಯೋಗ ಕೌಶಲ್ಯಗಳನ್ನು ಹೆಚ್ಚಿಸಿ, ಸ್ಥಳೀಯ ಕೈಗಾರಿಕೆಗಳಲ್ಲಿ ಕಾರ್ಯಸ್ಥಳಗಳಲ್ಲಿಯೇ ಉದ್ಯೋಗ ತರಬೇತಿ (On the Job) ನೀಡಿ, ಉದ್ಯೋಗ ಒದಗಿಸಲಾಗುವ ಕೌಶಲ್ಯಾಭಿವೃದ್ಧಿ ತರಬೇತಿ ಯೋಜನೆಯ ಮಾರ್ಗಸೂಚಿಗಳನ್ನು ಈ ಆದೇಶದ ಅನುಬಂಧದಲ್ಲಿರುವಂತೆ ಅನುಮೋದಿಸಿ ಜಾರಿಗೊಳಿಸಲಾಗಿದೆ. ಸದರಿ ಮಾರ್ಗಸೂಚಿಯು ಈ ಆದೇಶ ಹೊರಡಿಸಿದ ದಿನಾಂಕದಿಂದ ಹಾಗೂ ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

**ಜಂಟಿ ನಿರ್ದೇಶಕರುಗಳ ಅಧ್ಯಕ್ಷತೆಯಲ್ಲಿ ರಚಿಸಿದ ಸಮಿತಿಯಲ್ಲಿ ಅಧಿಕಾರೇತರ ಸದಸ್ಯರನ್ನು ನೇಮಿಸುವ ಸಂದರ್ಭದಲ್ಲಿ, ಸದರಿಯವರ ಹೆಸರು ಮತ್ತು ವಿವರಗಳೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿ, ಅನುಮೋದನೆ ಪಡೆದುಕೊಳ್ಳತಕ್ಕದ್ದು.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ನಾಗರಾಜ**
ಪೀಠಾಧಿಕಾರಿ (ಸಪ್ರಕೈ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 30 ಸಪ್ರಕೈ 2016, ಬೆಂಗಳೂರು ದಿನಾಂಕ: 08.06.2016ರ ಅನುಬಂಧ**

**ಕೈಗಾರಿಕಾ ಉದ್ದೇಶಕ್ಕಾಗಿ ಕೆಐಎಡಿಬಿ ಮೂಲಕ ಸ್ವಾಧೀನಪಡಿಸಿಕೊಂಡ ಜಮೀನಿನ ಭೂ ಮಾಲೀಕರು / ಕುಟುಂಬ ಸದಸ್ಯರುಗಳಿಗೆ ಹಾಗೂ ಸ್ಥಳೀಯ ಗ್ರಾಮೀಣ ಯುವ ಜನರಿಗೆ ಉದ್ಯೋಗ ಕೌಶಲ್ಯಗಳನ್ನು ಹೆಚ್ಚಿಸಿ, ಸ್ಥಳೀಯ ಕೈಗಾರಿಕೆಗಳಲ್ಲಿಯೇ ಉದ್ಯೋಗ ತರಬೇತಿ ನೀಡಿ ಉದ್ಯೋಗ ಒದಗಿಸುವ ಬಗ್ಗೆ ಮಾರ್ಗಸೂಚಿ.**

**1. ಪ್ರಸ್ತಾವನೆ :**

ಕೈಗಾರಿಕಾ ಉದ್ದೇಶಕ್ಕಾಗಿ ಕೆಐಎಡಿಬಿ ಮೂಲಕ ಸ್ವಾಧೀನಪಡಿಸಿಕೊಂಡ ಜಮೀನಿನ ಭೂ ಮಾಲೀಕರು / ಕುಟುಂಬ ಸದಸ್ಯರುಗಳಿಗೆ ಹಾಗೂ ಸಂಬಂಧಿಸಿದ ಗ್ರಾಮದ ಯುವಜನರಿಗೆ ಉದ್ಯೋಗ ಕೌಶಲ್ಯಗಳನ್ನು ಹೆಚ್ಚಿಸಿ, ಸ್ಥಳೀಯ ಕೈಗಾರಿಕೆಗಳಲ್ಲಿಯೇ ಉದ್ಯೋಗ ತರಬೇತಿ ನೀಡಿ ಉದ್ಯೋಗ ಒದಗಿಸಲು 2016–17ನೇ ಸಾಲಿನ ಆಯವ್ಯಯದ ಪ್ಯಾರ 373ರಲ್ಲಿ ಕೆಳಕಂಡಂತೆ ಘೋಷಿಸಲಾಗಿದೆ.

"ಕೈಗಾರಿಕೆಗಳಿಗೆ ಭೂಮಿ ಕಳೆದುಕೊಂಡವರಿಗೆ ಮತ್ತು ಸ್ಥಳೀಯ ಗ್ರಾಮೀಣ ಯುವಜನತೆಗೆ, ಉದ್ಯೋಗ ಕೌಶಲ್ಯಗಳನ್ನು ಹೆಚ್ಚಿಸಿ, ಸ್ಥಳೀಯ ಕೈಗಾರಿಕೆಗಳಲ್ಲಿ ಕಾರ್ಯಸ್ಥಳಗಳಲ್ಲಿಯೇ ಉದ್ಯೋಗ ತರಬೇತಿ (on the job) ನೀಡಿ ಉದ್ಯೋಗ ಒದಗಿಸಲಾಗುವುದು".

ಅದರಂತೆ, ವಿದ್ಯಾರ್ಹತೆಗೆ ತಕ್ಕಂತೆ ಕೌಶಲ್ಯ ತರಬೇತಿ ನೀಡುವ ಮೂಲಕ ಸ್ಥಳೀಯ ಕೈಗಾರಿಕೆಗಳಲ್ಲಿ ಉದ್ಯೋಗಾವಕಾಶ ಕಲ್ಪಿಸಲು ಉದ್ದೇಶಿಸಲಾಗಿದೆ.

**2. ತರಬೇತಿ ಅಭ್ಯರ್ಥಿಗಳ ಅರ್ಹತೆ :**

- ✓ ವಯಸ್ಸು – ಕನಿಷ್ಠ 18 ರಿಂದ 45 ವರ್ಷಗಳು
- ✓ ಭೂಮಿ ಕಳೆದುಕೊಂಡ ಮಾಲೀಕರು / ಅವರ ಅವಲಂಬಿತರ ಕುಟುಂಬದ ಸದಸ್ಯರು ಹಾಗೂ ಕೈಗಾರಿಕಾ ಪ್ರದೇಶ ಸ್ಥಾಪಿತವಾದ ಸ್ಥಳೀಯ ಗ್ರಾಮಗಳ ನಿರುದ್ಯೋಗಿ ಗ್ರಾಮೀಣ ಯುವಜನರು.

**3. ಅಭ್ಯರ್ಥಿಗಳ ಆಯ್ಕೆ ವಿಧಾನ :**

ಭೂಮಿಯನ್ನು ಕಳೆದುಕೊಂಡ ಮಾಲೀಕರು / ಕುಟುಂಬ ಸದಸ್ಯರ ವಿವರಗಳನ್ನು ಭೂಸ್ವಾಧೀನಾಧಿಕಾರಿಗಳು, ಕೆಐಎಡಿಬಿ ರವರು ಸಂಬಂಧಪಟ್ಟ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ಇವರಿಗೆ ಸಲ್ಲಿಸತಕ್ಕದ್ದು. ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ರವರು ಕೆಐಎಡಿಬಿ ಯಿಂದ ಪಡೆದ ಪಟ್ಟಿಯಿಂದ ತರಬೇತಿ ಪಡೆಯಲು ಇಚ್ಛಿಸುವ ಅಭ್ಯರ್ಥಿಗಳ ಪಟ್ಟಿ ತಯಾರಿಸುವುದು. ಇದಲ್ಲದೇ, ಕೈಗಾರಿಕಾ ಪ್ರದೇಶ ಸ್ಥಾಪಿತವಾದ ಸ್ಥಳೀಯ ಗ್ರಾಮದ ಯುವಜನರಿಂದ ಅರ್ಜಿಗಳನ್ನು ಪಡೆಯುವುದು. ಸದರಿ ಗುರುತಿಸಿರುವ ಅಭ್ಯರ್ಥಿಗಳ ಪಟ್ಟಿಯನ್ನು ಈ ಕೆಳಕಂಡ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯಲ್ಲಿ ಮಂಡಿಸಿ, ನಿಯಮಾನುಸಾರ ಆಯ್ಕೆ ಮಾಡಿ, ಆಯ್ಕೆಯಾದ ಅಭ್ಯರ್ಥಿಗಳನ್ನು ತರಬೇತಿಗೆ ನಿಯೋಜಿಸುವುದು.

**ಆಯ್ಕೆ ಸಮಿತಿ**

| ಕ್ರಮ ಸಂಖ್ಯೆ | ಅಧಿಕಾರಿ ಹುದ್ದೆ | ಷರಾ |
|---|---|---|
| 1. | ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ | ಅಧ್ಯಕ್ಷರು |
| 2. | ಕೈಗಾರಿಕಾ ಸಂಘ ಸಂಸ್ಥೆಯ ಅಧ್ಯಕ್ಷರು / ಪ್ರತಿನಿಧಿ | ಸದಸ್ಯರು |
| 3. | ಅಭಿವೃದ್ಧಿ ಅಧಿಕಾರಿಗಳು/ಭೂಸ್ವಾಧೀನಾಧಿಕಾರಿಗಳು, ಕೆಐಎಡಿಬಿ | ಸದಸ್ಯರು |
| 4. | ಸಂಬಂಧಪಟ್ಟ ಕೈಗಾರಿಕೆಗಳ ಪ್ರತಿನಿಧಿಗಳು | ಸದಸ್ಯರು |
| 5. | ಉಪ ನಿರ್ದೇಶಕರು (ಖಾಗ್ರಾ), ಜಿಲ್ಲಾ ಪಂಚಾಯತ್ | ಸದಸ್ಯರು |
| 6. | ಉಪ ನಿರ್ದೇಶಕರು / ಸಹಾಯಕ ನಿರ್ದೇಶಕರು, ಜಿಕೈಕೇ | ಸದಸ್ಯ ಕಾರ್ಯದರ್ಶಿ |

**4. ತರಬೇತಿ ಕಾರ್ಯಕ್ರಮ ಅನುಷ್ಠಾನ ವಿಧಾನ :**

✓ ಆಯ್ಕೆಯಾದ ಅಭ್ಯರ್ಥಿಗಳನ್ನು ವಿದ್ಯಾರ್ಹತೆಗೆ ತಕ್ಕಂತೆ ಸ್ಥಳೀಯ ಕೈಗಾರಿಕೆಗಳಲ್ಲಿ ಅವಶ್ಯಕವಿರುವ ಕುಶಲತೆಗಳನ್ನು ಗುರುತಿಸಿ ಹಾಗೂ ತರಬೇತಿ ನೀಡಲು ಸ್ಥಳೀಯ ಕೈಗಾರಿಕೆಗಳನ್ನು ಗುರುತಿಸಿ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ರವರು ಅಭ್ಯರ್ಥಿಗಳ ಪಟ್ಟಿಯನ್ನು ಕೈಗಾರಿಕೆಗಳಿಗೆ ಒದಗಿಸಿ ತರಬೇತಿ ಕಾರ್ಯಕ್ರಮವನ್ನು ಪ್ರಾರಂಭಿಸಲು ತಿಳಿಸುವುದು ಹಾಗೂ ತರಬೇತಿ ಕಾರ್ಯಕ್ರಮದ ಚಟುವಟಿಕೆ, ಅಭ್ಯರ್ಥಿಗಳ ಪಟ್ಟಿ ಹಾಗೂ ತರಬೇತಿಯ ಅವಧಿ ವಿವರಗಳನ್ನು ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ರವರು ಮಾಹಿತಿಗಾಗಿ ಕೇಂದ್ರ ಕಚೇರಿಗೆ ಸಲ್ಲಿಸುವುದು.

✓ ಸ್ಥಳೀಯವಾಗಿ ಇರುವ ಕೈಗಾರಿಕೆಗಳಲ್ಲಿ ಬೇಡಿಕೆ ಹಾಗೂ ವಿದ್ಯಾರ್ಹತೆಗೆ ತಕ್ಕಂತೆ ಕನಿಷ್ಠ 3 ರಿಂದ 6 ತಿಂಗಳ ಅವಧಿಗೆ ತರಬೇತಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳತಕ್ಕದ್ದು.

✓ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ರವರು ತರಬೇತಿ ಕಾರ್ಯಕ್ರಮವನ್ನು ಜರುಗಿಸುವ ಕುರಿತು ಹಾಗೂ ತರಬೇತಿ ಪೂರ್ಣಗೊಂಡ ನಂತರ ಅಭ್ಯರ್ಥಿಗಳಿಗೆ ಉದ್ಯೋಗಾವಕಾಶ ದೊರಕಿಸಿಕೊಡುವ ನಿಟ್ಟಿನಲ್ಲಿ ಸ್ಥಳೀಯ ಹಾಲಿ ಇರುವ ಕೈಗಾರಿಕೆಗಳೊಂದಿಗೆ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

✓ ಕೈಗಾರಿಕಾ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಂಡ ಭೂಮಿಯ ಸ್ಥಳದಲ್ಲಿ ಸ್ಥಾಪಿಸಲಾಗುವ ಕೈಗಾರಿಕೆಗಳಿಗೆ ಅವಶ್ಯಕವಿರುವ ಮಾನವ ಸಂಪನ್ಮೂಲವನ್ನು ಒದಗಿಸುವ ನಿಟ್ಟಿನಲ್ಲಿ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ರವರು ಸದರಿ ಸ್ಥಳದಲ್ಲಿ ಸ್ಥಾಪಿತವಾಗುತ್ತಿರುವ ಕೈಗಾರಿಕೆಗಳೊಂದಿಗೆ ಸಮಾಲೋಚಿಸಿ ಅವಶ್ಯಕವಿರುವ ತರಬೇತಿಯನ್ನು ನೀಡಲು ಕ್ರಮ ವಹಿಸುವುದು ಹಾಗೂ ತರಬೇತಿ ನಂತರ ಸ್ಥಾಪಿತವಾಗುವ ಕೈಗಾರಿಕೆಗಳಲ್ಲಿ ಉದ್ಯೋಗಾವಕಾಶ ದೊರಕಿಸಿಕೊಡಲು ಕೈಗಾರಿಕೆಗಳೊಂದಿಗೆ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

✓ ಈ ಯೋಜನೆಯಡಿ ಅಭ್ಯರ್ಥಿಗಳು ನೇರವಾಗಿ ಸ್ಥಳೀಯ / ಕೈಗಾರಿಕಾ ಪ್ರದೇಶದಲ್ಲಿ ಸ್ಥಾಪಿಸುವ ಕೈಗಾರಿಕೆಗಳಲ್ಲಿ ಉದ್ಯೋಗ ಆಧಾರಿತ ತರಬೇತಿ ಪಡೆಯಲು ಸಾಧ್ಯವಾಗದ ಪಕ್ಷದಲ್ಲಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ವಿವಿಧ ಯೋಜನೆಗಳ ಮೂಲಕ ಅನುಷ್ಠಾನಗೊಳಿಸುತ್ತಿರುವ ತರಬೇತಿ ಕಾರ್ಯಕ್ರಮಗಳ ಮೂಲಕ ಪ್ರಥಮ ಹಂತದ ತರಬೇತಿ ನೀಡಿ, ಸ್ಥಳೀಯ / ಕೈಗಾರಿಕಾ ಪ್ರದೇಶದಲ್ಲಿ ಸ್ಥಾಪಿಸುವ ಕೈಗಾರಿಕೆಗಳಲ್ಲಿ ಕಾರ್ಯಸ್ಥಳಗಳಲ್ಲಿಯೇ ಉದ್ಯೋಗ ತರಬೇತಿ ನೀಡಬಹುದಾಗಿರುತ್ತದೆ.

**ಆಯ್ಕೆಯಾದ ಅಭ್ಯರ್ಥಿಗಳಿಗೆ ಪ್ರೋತ್ಸಾಹಧನ :**

✓ **ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಪ್ರೋತ್ಸಾಹಧನ** – ತರಬೇತಿ ಅವಧಿಯಲ್ಲಿ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯಲ್ಲಿ ಚರ್ಚಿಸಿ ವಿದ್ಯಾರ್ಹತೆ ಹಾಗೂ ಕೌಶಲ್ಯಕ್ಕನುಗುಣವಾಗಿ ಮಾಸಿಕ ಪ್ರೋತ್ಸಾಹಧನ ಗರಿಷ್ಠ ₹. 5,000/– ಗಳಿಗೆ ಮೀರದಂತೆ ನೀಡಬಹುದಾಗಿರುತ್ತದೆ. ಸಂಬಂಧಿಸಿದ ಪ್ರೋತ್ಸಾಹಧನವನ್ನು ಜಂಟಿ ನಿರ್ದೇಶಕರು ಅಭ್ಯರ್ಥಿಗಳ ಬ್ಯಾಂಕ್ ಖಾತೆಗೆ ನೇರವಾಗಿ ಜಮಾ ಮಾಡತಕ್ಕದ್ದು.

✓ **ಕೈಗಾರಿಕೆಗಳ ಪ್ರೋತ್ಸಾಹಧನ** – ತರಬೇತಿ ಅವಧಿಯಲ್ಲಿ ತರಬೇತಿ ನೀಡುತ್ತಿರುವ ಕೈಗಾರಿಕೆಗಳು ನಿಯಮಾನುಸಾರ ಪ್ರತಿ ಮಾಹೆ ಕೈಗಾರಿಕೆಯ ಪಾಲಿನ ಪ್ರೋತ್ಸಾಹಧನವನ್ನು ವಿದ್ಯಾರ್ಹತೆ ಹಾಗೂ ಕೌಶಲ್ಯಕ್ಕನುಗುಣವಾಗಿ ಅಭ್ಯರ್ಥಿಗಳ ಬ್ಯಾಂಕ್ ಖಾತೆಗೆ ನೇರವಾಗಿ ಜಮಾ ಮಾಡತಕ್ಕದ್ದು. ಆಯ್ಕೆ ಸಮಿತಿಯನ್ನು ಕೈಗಾರಿಕೆಗಳು ನೀಡುವ ಪ್ರೋತ್ಸಾಹಧನದ ಬಗ್ಗೆ ಸಂಬಂಧಪಟ್ಟ ಕೈಗಾರಿಕೆಗಳೊಂದಿಗೆ ಚರ್ಚಿಸಿ, ನಿಗಧಿಪಡಿಸುವುದು.

**6. ಸಲ್ಲಿಸಬೇಕಾದ ದಾಖಲಾತಿಗಳು :**

✓ ಭಾವಚಿತ್ರದೊಂದಿಗೆ ನಿಗಧಿತ ನಮೂನೆಯಲ್ಲಿ ಅರ್ಜಿ

✓ ವಯಸ್ಸಿನ ಬಗ್ಗೆ ದಾಖಲಾತಿ

✓ ವಿದ್ಯಾರ್ಹತೆ ಬಗ್ಗೆ ದಾಖಲಾತಿ

✓ ವಿಳಾಸದ ಬಗ್ಗೆ ದಾಖಲಾತಿ

**7. ತರಬೇತಿಯ ಪಠ್ಯಕ್ರಮ :**

ತರಬೇತಿಗೆ ಸಂಬಂಧಿಸಿದ ಪಠ್ಯಕ್ರಮವನ್ನು ಜಂಟಿ ನಿರ್ದೇಶಕರು, ಜಿಕೈಕೇ ರವರು ಕೈಗಾರಿಕೆಗಳಿಂದ ಪಡೆದು ಆಯ್ಕೆ ಸಮಿತಿಯಲ್ಲಿ ಚರ್ಚಿಸಿ ಅನುಷ್ಠಾನಗೊಳಿಸತಕ್ಕದ್ದು. ತರಬೇತಿ ಕಾರ್ಯಕ್ರಮದ ಸಂಪೂರ್ಣ ಮೇಲುಸ್ತುವಾರಿಯನ್ನು ಜಂಟಿ ನಿರ್ದೇಶಕರು, ಜಿಕೈಕೇ ರವರು ವಹಿಸುವುದು.

**8. ತರಬೇತಿ ವೆಚ್ಚ :**

ಕೈಗಾರಿಕೆಗಳಿಗೆ ಭೂಮಿ ಕಳೆದುಕೊಂಡವರಿಗೆ ಮತ್ತು ಸ್ಥಳೀಯ ಗ್ರಾಮೀಣ ಯುವಜನತೆಗೆ, ಉದ್ಯೋಗ ಕೌಶಲ್ಯಗಳನ್ನು ಹೆಚ್ಚಿಸಿ, ಸ್ಥಳೀಯ ಕೈಗಾರಿಕೆಗಳಲ್ಲಿ ಕಾರ್ಯಸ್ಥಳಗಳಲ್ಲಿಯೇ ಉದ್ಯೋಗ ತರಬೇತಿ (On the Job) ನೀಡಿ, ಉದ್ಯೋಗ ಒದಗಿಸಲು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಲೆಕ್ಕಶೀರ್ಷಿಕೆ 2851–00–102–0–69 ಅಡಿಯಲ್ಲಿ ಹಂಚಿಕೆಯಾಗಿರುವ ಅನುದಾನದಲ್ಲಿ ಅನುಷ್ಠಾನಗೊಳಿಸತಕ್ಕದ್ದು.

**P.R. 475** **ಎಸ್.ನಾಗರಾಜ**

**S.C. - 50** ಪೀಠಾಧಿಕಾರಿ (ಸಪ್ರಕೈ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** 2016–17ನೇ ಸಾಲಿನ ಆಯವ್ಯಯದ ಭಾಷಣದಲ್ಲಿ ಘೋಷಿಸಿದಂತೆ, ಮಂಗಳೂರು, ಬಳ್ಳಾರಿ, ಧಾರವಾಡ ಮತ್ತು ಮೈಸೂರಿನಲ್ಲಿ ಮಹಿಳಾ ಪಾರ್ಕ್ ಸ್ಥಾಪಿಸುವ ಕುರಿತು.

**ಓದಲಾಗಿದೆ :** ಅಪರ ನಿರ್ದೇಶಕರು, ಎಂಎಸ್ಎಂಇ ಇವರ ಪತ್ರ ಸಂ: ಕೈವಾಇ/ಎಂಎಸ್ಎಂಇ/ಕೈವಿಅ–1/ಮ.ಪಾರ್ಕ್2016–17, ದಿನಾಂಕ: 16.04.2016.

**ಪ್ರಸ್ತಾವನೆ :**

ಅಪರ ನಿರ್ದೇಶಕರು, (ಎಂಎಸ್ಎಂಇ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ರವರು ಮೇಲೆ ಓದಲಾದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿ, ಮಾನ್ಯ ಮುಖ್ಯಮಂತ್ರಿಯವರು 2016–17ನೇ ಸಾಲಿನ ಆಯವ್ಯಯದ ಭಾಷಣದ ಕಂಡಿಕೆ–376ರಲ್ಲಿ "ಮಹಿಳಾ ಉದ್ಯಮಶೀಲತೆಯನ್ನು ಪ್ರೋತ್ಸಾಹಿಸುವ ದೃಷ್ಠಿಯಿಂದ ಮಂಗಳೂರು, ಬಳ್ಳಾರಿ, ಧಾರವಾಡ ಮತ್ತು ಮೈಸೂರಿನಲ್ಲಿ ಮಹಿಳಾ ಪಾರ್ಕ್‌ಗಳನ್ನು ಸ್ಥಾಪಿಸಲು ಕ್ರಮಕೈಗೊಳ್ಳಲಾಗುವುದೆಂದು ಪ್ರಸ್ತಾಪಿಸಿರುತ್ತಾರೆ". ಈಗಾಗಲೇ ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನ ಹಾರೋಹಳ್ಳಿ ಕೈಗಾರಿಕಾ ಪ್ರದೇಶದಲ್ಲಿ ಕೆಐಎಡಿಬಿ ಸಂಸ್ಥೆಯು 300 ಎಕರೆ ಜಮೀನಿನಲ್ಲಿ ಮಹಿಳಾ ಪಾರ್ಕ್‌ನ್ನು ಸ್ಥಾಪಿಸಲು ಕ್ರಮ ಕೈಗೊಂಡಿರುತ್ತದೆ. ಇದೇ ಮಾದರಿಯಲ್ಲಿ ಕೆಐಎಡಿಬಿ ಸಂಸ್ಥೆಯ ಮುಖಾಂತರ ಮಂಗಳೂರು, ಬಳ್ಳಾರಿ, ಧಾರವಾಡ ಮತ್ತು ಮೈಸೂರು ಜಿಲ್ಲೆಗಳಲ್ಲಿ 75 ರಿಂದ 100 ಎಕರೆ ಭೂಮಿಯನ್ನು ಗುರುತಿಸಿ, ಮಹಿಳಾ ಪಾರ್ಕ್ ಸ್ಥಾಪಿಸಲು ಭಾರತ ಸರ್ಕಾರದ ಎಂಎಸ್ಇ–ಸಿಡಿಪಿ ಯೋಜನೆಯಡಿ ಯೋಜನೆಯ ವೆಚ್ಚ ಒಟ್ಟು ಮೊತ್ತದ ಶೇ. 80ರಷ್ಟು ಗರಿಷ್ಠ ₹. 8.00 ಕೋಟಿಗಳ ಅನುದಾನ ಕೇಂದ್ರ ಸರ್ಕಾರದ ಎಂಎಸ್ಎಂಇ ಮಂತ್ರಾಲಯದಿಂದ ದೊರೆಯುತ್ತಿದ್ದು, ಉಳಿದ ಎಲ್ಲಾ ವೆಚ್ಚವನ್ನು ಅನುಷ್ಠಾನ ಸಂಸ್ಥೆಯಾದ ಕೆಐಎಡಿಬಿ ಭರಿಸಿ, ಮಂಗಳೂರು, ಬಳ್ಳಾರಿ, ಧಾರವಾಡ ಮತ್ತು ಮೈಸೂರಿನಲ್ಲಿ ಮಹಿಳಾ ಪಾರ್ಕ್‌ಗಳನ್ನು ಅನುಷ್ಠಾನಗೊಳಿಸಲು ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಈ ಯೋಜನೆಗೆ ರಾಜ್ಯ ಸರ್ಕಾರದಿಂದ ಯಾವುದೇ ಅನುದಾನವನ್ನು ನೀಡದಿರುವುದರಿಂದ, ಕೆಐಎಡಿಬಿಯು ತನ್ನ ಆಂತರಿಕ ಸಂಪನ್ಮೂಲಗಳಿಂದ ಹಾಗೂ ಭಾರತ ಸರ್ಕಾರದ ಎಂಎಸ್ಇ–ಸಿಡಿಪಿ ಯೋಜನೆಯಡಿ ಲಭ್ಯವಾಗುವ ₹. 8.00 ಕೋಟಿಗಳ ಅನುದಾನವನ್ನು ಪಡೆದು ಮಂಗಳೂರು, ಬಳ್ಳಾರಿ, ಧಾರವಾಡ ಮತ್ತು ಮೈಸೂರು ಜಿಲ್ಲೆಗಳಲ್ಲಿ 100 ಎಕರೆ ವಿಸ್ತೀರ್ಣದ ಮಹಿಳಾ ಪಾರ್ಕ್‌ಗಳನ್ನು ಅನುಷ್ಠಾನಗೊಳಿಸಲು ತಾತ್ವಿಕ ಅನುಮೋದನೆ ನೀಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 33 ಸಪ್ರಕೈ 2016, ಬೆಂಗಳೂರು, ದಿನಾಂಕ: 23.05.2016.**

2016–17ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ – 376ರಲ್ಲಿ ಘೋಷಿಸಿರುವಂತೆ, ಮಹಿಳಾ ಉದ್ಯಮಶೀಲತೆಯನ್ನು ಪ್ರೋತ್ಸಾಹಿಸುವ ದೃಷ್ಠಿಯಿಂದ ಮಂಗಳೂರು, ಬಳ್ಳಾರಿ, ಧಾರವಾಡ ಮತ್ತು ಮೈಸೂರು ಜಿಲ್ಲೆಗಳಲ್ಲಿ ಈ ಕೆಳಕಂಡ ಕೈಗಾರಿಕಾ ಪ್ರದೇಶಗಳಲ್ಲಿ ತಲಾ 100 ಎಕರೆ (ನೂರು ಎಕರೆ) ವಿಸ್ತೀರ್ಣದ ಮಹಿಳಾ ಪಾರ್ಕ್‌ಗಳನ್ನು ಅನುಷ್ಠಾನಗೊಳಿಸಲು ಸರ್ಕಾರವು ತಾತ್ವಿಕ ಅನುಮೋದನೆಯನ್ನು ನೀಡಲಾಗಿದೆ.

| ಕ್ರ. ಸಂ. | ಜಿಲ್ಲೆ | ಕೈಗಾರಿಕಾ ಪ್ರದೇಶ |
|---|---|---|
| 1. | ಮಂಗಳೂರು | ಕೆನರಾ |
| 2. | ಮೈಸೂರು | ಇಮ್ಮಾವು/ಅಡಕನಹಳ್ಳಿ |
| 3. | ಧಾರವಾಡ | ನರೇಂದ್ರ–ಮಮ್ಮಿಗಟ್ಟಿ |
| 4. | ಬಳ್ಳಾರಿ | ಕುಡತಿನಿ |

ಈ ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ ಭಾರತ ಸರ್ಕಾರದ ಎಂಎಸ್ಇ–ಸಿಡಿಪಿ ಯೋಜನೆಯ ಮಾರ್ಗಸೂಚಿಗಳನ್ನು ಪಾಲಿಸತಕ್ಕದ್ದು.

**P.R. 476** ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**S.C. - 50** **ಎಸ್.ನಾಗರಾಜ**

ಪೀಠಾಧಿಕಾರಿ (ಸಪ್ರಕೈ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಸಕಇ 220 ಪಕಸೇ 2015, ಬೆಂಗಳೂರು, ದಿನಾಂಕ : 31–05–2016**

ಸರ್ಕಾರದ ಆದೇಶ ಸಂಖ್ಯೆ: ಸಕಇ 220 ಪಕಸೇ 2015, ದಿನಾಂಕ: 30.01.2016ರ ಪುಟ ಸಂಖ್ಯೆ. (2)ರ ಪ್ಯಾರಾ 3ರ ಮೊದಲನೇ ಸಾಲಿನಲ್ಲಿ ದಿನಾಂಕ: 15–15–2015 ಎಂಬುದರ ಬದಲಾಗಿ **"15–05–2015"** ಎಂದು ಹಾಗೂ ಪುಟ ಸಂಖ್ಯೆ. (3)ರ ಕಾಗದ ಪತ್ರಗಳ ವಿವರದ ಪಟ್ಟಿಯ ಕ್ರಮ ಸಂಖ್ಯೆ. (2)ರಲ್ಲಿನ **ದಿನಾಂಕ: 24–03–2015** ಎಂಬುದರ ಬದಲಾಗಿ **"23–03–2015"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

**P.R. 477**
**SC – 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಗಿರಿಜಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನ ಶಾಸ್ತ್ರ ಸಚಿವಾಲಯ

**ವಿಷಯ :** 2013–14ನೇ ಸಾಲಿನ ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಖರೀದಿಸಿರುವ ಆಹಾರಧಾನ್ಯಗಳಿಗೆ ಸಂಬಂಧಿಸಿದಂತೆ ಕ್ಲೇಮನ್ನು ಸಲ್ಲಿಸುವ ಬಗ್ಗೆ.

**ಓದಲಾಗಿದೆ :**

1. ದಿನಾಂಕ: 19.11.2013ರ ಸರ್ಕಾರಿ ಆದೇಶ ಸಂಖ್ಯೆ: ಆನಾಸ 29 ಆರ್‌ಪಿಆರ್ 2013.
2. ದಿನಾಂಕ: 26.08.2014ರ ಸರ್ಕಾರಿ ಆದೇಶ ಸಂಖ್ಯೆ: ಆನಾಸ 29 ಆರ್‌ಪಿಆರ್ 2013.
3. ದಿನಾಂಕ: 13.10.2015ರ ಸಂಖ್ಯೆ: ಕಆನಾಸನಿನಿ/ಸಂ/ಬೆಂಬೆ/2013–14/3235ರ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ ಇವರ ಪತ್ರ.
4. ದಿನಾಂಕ: 04.02.2016ರ ಸರ್ಕಾರಿ ಆದೇಶ ಸಂಖ್ಯೆ: ಆನಾಸ 02 ಆರ್‌ಪಿಆರ್ 2016.
5. ದಿನಾಂಕ: 10.03.2016ರ ಸಂಖ್ಯೆ: ಸಿಎಫ್‌ಎಸ್/ಸಿಎಸ್/ಎಂಎಸ್‌ಪಿ/41/2015–16ರ ಆಯುಕ್ತರು, ಆನಾಸ ಮತ್ತು ಗ್ರಾವ್ಯ ಇಲಾಖೆ ಇವರ ಪತ್ರ.
6. ದಿನಾಂಕ: 08.04.2016ರ ಸಂಖ್ಯೆ: ಆನಾಸ 59 ಆರ್‌ಪಿಆರ್ 2015ರ ಸರ್ಕಾರದ ಕಾರ್ಯದರ್ಶಿ, ಆನಾಸ ಮತ್ತು ಗ್ರಾವ್ಯ ಇಲಾಖೆ ಇವರ ಟಿಪ್ಪಣಿ.
7. ದಿನಾಂಕ: 25.04.2016ರ ಸಂಖ್ಯೆ: ಆನಾಸ 59 ಆರ್‌ಪಿಆರ್ 2015ರ ಕಾರ್ಯದರ್ಶಿ, ಆನಾಸ ಮತ್ತು ಗ್ರಾವ್ಯ ಇಲಾಖೆ ಇವರ ಪತ್ರ.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ: 19.11.2013ರ ಸರ್ಕಾರಿ ಆದೇಶದಲ್ಲಿ 2013–14ನೇ ಸಾಲಿನ ಕನಿಷ್ಟ ಬೆಂಬಲ ಬೆಲೆ ಯೋಜನೆಯಲ್ಲಿ ರೈತರಿಂದ ಖರೀದಿಸಲು ಸಾಮಾನ್ಯ ಭತ್ತಕ್ಕೆ ಕೇಂದ್ರ ಸರ್ಕಾರವು ನಿಗಧಿಪಡಿಸಿರುವ ದರ ಪ್ರತಿ ಕ್ವಿಂಟಾಲ್‌ಗೆ ₹. 1310/–ರ ಜೊತೆಗೆ ರಾಜ್ಯ ಸರ್ಕಾರದ ಪ್ರೋತ್ಸಾಹ ಧನ ಪ್ರತಿ ಕ್ವಿಂಟಾಲ್‌ಗೆ ₹. 290/– ನ್ನು ಸೇರಿಸಿ ಒಟ್ಟು ₹. 1600/– ದರದಲ್ಲಿ ಖರೀದಿಸಲು ಆದೇಶಿಸಲಾಗಿರುತ್ತದೆ. ಮೇಲೆ ಓದಲಾದ (2)ರ ದಿನಾಂಕ: 26.08.2014ರ ಸರ್ಕಾರಿ ಆದೇಶದಲ್ಲಿ 2013–14ನೇ ಸಾಲಿನ ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಖರೀದಿಸಿರುವ ಒಟ್ಟು 2,38,661.822 ಮೆ.ಟನ್ ಭತ್ತವನ್ನು ಆಯಾ ಜಿಲ್ಲೆಗಳಲ್ಲಿ ಕಾರ್ಯನಿರತವಾಗಿರುವ ಅಕ್ಕಿ ಗಿರಣಿಗಳ ಮೂಲಕ ಹಲ್ಲಿಂಗ್ ಮಾಡಲು ಆದೇಶಿಸಲಾಗಿರುತ್ತದೆ. ಮೇಲೆ ಓದಲಾದ (3)ರ ದಿನಾಂಕ: 13.10.2015 ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ ಇವರು 2013–14ನೇ ಸಾಲಿನಲ್ಲಿ ಖರೀದಿಸಲಾಗಿರುವ ಆಹಾರಧಾನ್ಯಗಳಿಗೆ ದರಪಟ್ಟಿಯನ್ನು ಅನುಮೋದಿಸುವಂತೆ ಕೋರಿರುತ್ತಾರೆ. ಮೇಲೆ ಓದಲಾದ (4)ರ ದಿನಾಂಕ: 04.02.2016 ಸರ್ಕಾರಿ ಆದೇಶದಲ್ಲಿ 2013–14ನೇ ಸಾಲಿನ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಖರೀದಿಸಲಾಗಿರುವ ಆಹಾರಧಾನ್ಯಗಳಿಗೆ ಸಂಬಂಧಿಸಿದಂತೆ ದರಪಟ್ಟಿ ಮತ್ತು ವೆಚ್ಚಗಳನ್ನು ಅನುಮೋದಿಸುವ ಕುರಿತು ಪರಿಶೀಲಿಸಲು ಆಯುಕ್ತರು, ಆನಾಸ ಮತ್ತು ಗ್ರಾವ್ಯ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ರಚಿಸಲಾಗಿರುತ್ತದೆ. ಮೇಲೆ ಓದಲಾದ (5)ರ 10.03.2016ರ ಪತ್ರದಲ್ಲಿ ಸದರಿ ಸಮಿತಿಯು ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿರುತ್ತದೆ. ಮೇಲೆ ಓದಲಾದ (6)ರ ದಿನಾಂಕ: 08.04.2016ರ ಕಾರ್ಯದರ್ಶಿಯವರ ಟಿಪ್ಪಣಿಯಲ್ಲಿ 2013–14ನೇ ಸಾಲಿನ ಎಂಎಸ್‌ಪಿ ಯೋಜನೆಗೆ ಸಂಬಂಧಿಸಿದಂತೆ ಕೆಲವೊಂದು ಸ್ಪಷ್ಟೀಕರಣವನ್ನು ವ್ಯವಸ್ಥಾಪಕ ನಿರ್ದೇಶಕರು, ಕೆಎಫ್‌ಸಿಎಸ್‌ಸಿ ಹಾಗೂ ಆಯುಕ್ತರು, ಆನಾಸ ಮತ್ತು ಗ್ರಾವ್ಯ ಇಲಾಖೆ ಇವರಿಂದ ಕೋರಲಾಗಿದೆ. ಮೇಲೆ ಓದಲಾದ (7)ರ ಕಾರ್ಯದರ್ಶಿಯವರ ಪತ್ರದಲ್ಲಿ 2013–14ನೇ ಸಾಲಿನ ಎಂಎಸ್‌ಪಿ ಪ್ರಕ್ರಿಯೆಯ ಪ್ರಾಸಂಗಿಕ ವೆಚ್ಚದ ಕ್ಲೇಂಗಳ ಮರುಪಾವತಿ ಬಗ್ಗೆ ಕ್ರಮವಹಿಸಲು ಆಯುಕ್ತರು, ಆನಾಸ ಮತ್ತು ಗ್ರಾವ್ಯ ಇಲಾಖೆ ಹಾಗೂ ರಾಜ್ಯದ ಮೂರು ಖರೀದಿ ಏಜೆನ್ಸಿಗಳಿಗೆ ಕೆಲವು ನಿರ್ದೇಶನವನ್ನು ನೀಡಲಾಗಿರುತ್ತದೆ. ಈ ಪತ್ರದ ಕಂಡಿಕೆ – 8ರಲ್ಲಿ ಪರಿವರ್ತಿತ ಅಕ್ಕಿಯ (ಸಿಎಂಆರ್) ಸಾಗಾಣಿಕೆ ಹಾಗೂ ಹಮಾಲಿ ವೆಚ್ಚವನ್ನು ಮುಂದಿನ ಆದೇಶದವರೆಗೆ ತಡೆಹಿಡಿಯಲು ಸೂಚಿಸಲಾಗಿರುತ್ತದೆ. ಆದರೆ ಕೇಂದ್ರ ಸರ್ಕಾರದ ಮಾರ್ಗಸೂಚಿಗಳ ಅನುಸಾರವೇ ಗಿರಣಿದಾರರಿಗೆ ಎಲ್ಲಾ ವೆಚ್ಚಗಳನ್ನು ಪಾವತಿಸಬೇಕಾಗಿರುವುದರಿಂದ, ಈ ಅಂಶವನ್ನು ಪ್ರತ್ಯೇಕವಾಗಿ ಉಲ್ಲೇಖಿಸುವ ಅವಶ್ಯಕತೆ ಇರುವುದಿಲ್ಲವಾದ್ದರಿಂದ, ಇದನ್ನು ಮರುಪರಿಶೀಲಿಸಿ ಈ ವೆಚ್ಚಗಳನ್ನು ಉಳಿದ ವೆಚ್ಚಗಳಂತೆ ಮಾರ್ಗಸೂಚಿಗಳ ಪ್ರಕಾರ ಪಾವತಿಸಲು ಹಾಗೂ 2013–14ನೇ ಸಾಲಿನ ಎಂಎಸ್‌ಪಿ ಪ್ರಕ್ರಿಯೆಯ ದರಪಟ್ಟಿಯ ಅನುಮೋದನೆಗೆ ಸಲ್ಲಿಸಲಾಗಿರುವ ಪ್ರಸ್ತಾವನೆ ಮತ್ತು ಪ್ರಾಸಂಗಿಕ ವೆಚ್ಚದ ಕ್ಲೇಂಗಳ ಮರುಪಾವತಿಯ ಬಗ್ಗೆ ಆಯುಕ್ತರು, ಆನಾಸ ಮತ್ತು ಗ್ರಾವ್ಯ ಇಲಾಖೆ ಹಾಗೂ ರಾಜ್ಯದ ಮೂರು ಖರೀದಿ ಏಜೆನ್ಸಿಗಳ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 59 ಆರ್‌ಪಿಆರ್ 2015, ಬೆಂಗಳೂರು, ದಿನಾಂಕ: 04.06.2016.**

2013–14ನೇ ಸಾಲಿನ ಎಂಎಸ್‌ಪಿ ಪ್ರಕ್ರಿಯೆಯಲ್ಲಿ ಸಂಗ್ರಹಣೆಯಾದ ಸಿಎಂಆರ್ ಭತ್ತ ಪರಿವರ್ತಿತ ಅಕ್ಕಿಯನ್ನು ರಾಜ್ಯ ಸರ್ಕಾರವು ತನ್ನ ಸ್ವಂತ ಉಪಯೋಗಕ್ಕಾಗಿ (ಸಾರ್ವಜನಿಕ ವಿತರಣಾ ಪದ್ಧತಿಗಾಗಿ) ಬಳಕೆ (ಸ್ಟೇಟ್ ಪೂಲ್) ಮಾಡಿಕೊಂಡಿರುವುದರಿಂದ, ಇದಕ್ಕೆ ಸಂಬಂಧಿಸಿದ ಎಂಎಸ್‌ಪಿ ಹಾಗೂ ಪ್ರಾಸಂಗಿಕ ವೆಚ್ಚವನ್ನು ರಾಜ್ಯ ಸರ್ಕಾರವೇ ಭರಿಸಲಿದ್ದು, ಈ ವೆಚ್ಚಗಳ ಕ್ಲೇಂಗಳನ್ನು ಕೇಂದ್ರ ಸರ್ಕಾರದ 2013–14ನೇ ಸಾಲಿನ ಎಂಎಸ್‌ಪಿ ಪ್ರಕ್ರಿಯೆಗೆ ಸಂಬಂಧಿಸಿದ ಅನುಮೋದಿತ ತಾತ್ಕಾಲಿಕ ದರಪಟ್ಟಿಯಂತೆಯೇ ಹಾಗೂ ಡಿಸಿಪಿ ಖರೀದಿ ಪ್ರಕ್ರಿಯೆಗೆ ಸಂಬಂಧಿಸಿದಂತೆ ಕ್ಲೇಂಗಳ ಮರುಪಾವತಿಯ ಕುರಿತು ಕೇಂದ್ರ ಸರ್ಕಾರದ / ಎಫ್‌ಸಿಐ ರವರ ಮಾರ್ಗಸೂಚಿಗಳಂತೆ ಪಾವತಿ ಮಾಡಲಾಗುವುದು. ಅಲ್ಲದೆ, ಕೇಂದ್ರ ಸರ್ಕಾರದ ಪ್ರಚಲಿತ ಪದ್ಧತಿಯಂತೆ 2 ಹಂತದಲ್ಲಿ ಪಾವತಿ ಮಾಡಲಾಗುವುದು. ಮೊದಲನೇ ಹಂತದಲ್ಲಿ ತಾತ್ಕಾಲಿಕ (ಪ್ರಾವಿಷನಲ್) ಕ್ಲೇಂಗಳನ್ನು ಕೇಂದ್ರ ಸರ್ಕಾರದ ಅನುಮೋದಿತ ತಾತ್ಕಾಲಿಕ ದರಪಟ್ಟಿಯಂತೆ ಶೇ. 100 ರಷ್ಟು ಮರುಪಾವತಿಸಲಾಗುವುದು. ಆದರೆ, ಮಿಲ್ಲಿಂಗ್ ಹಾಗೂ ಚೀಲದ ದರಗಳನ್ನು ಕೇಂದ್ರ ಸರ್ಕಾರದ ಅನುಮೋದಿತ ದರಪಟ್ಟಿಯ ಬದಲಾಗಿ 2013–14ನೇ ಸಾಲಿನ ಎಂಎಸ್‌ಪಿ ಭತ್ತ ಖರೀದಿ ಮತ್ತು ಹಲ್ಲಿಂಗ್ ಪ್ರಕ್ರಿಯೆಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರದ ಆದೇಶಗಳು / ಪತ್ರಗಳು ಸಂ: ಆನಾಸ 29 ಆರ್‌ಪಿಆರ್ 2013, ದಿನಾಂಕ: 17–12–2014 ಮತ್ತು ಸಂ: ಆನಾಸ 29 ಆರ್‌ಪಿಆರ್ 2013, ದಿನಾಂಕ: 11–12–2014ರಂತೆ ಭರಿಸಲಾಗುವುದು. ಅದೇ ರೀತಿ, ಸಂಗ್ರಹಣಾ ವೆಚ್ಚ, ಬಡ್ಡಿ, ಒಣಪಡಿ ಪ್ರಮಾಣ ಇತ್ಯಾದಿಗಳನ್ನು ಕೇಂದ್ರ ಸರ್ಕಾರದ ಅನುಮೋದಿತ ದರಪಟ್ಟಿಯಲ್ಲಿನ ಸೀಮಿತವಾದ ಅವಧಿಗೆ ಬದಲಾಗಿ ವಾಸ್ತವಿಕ ಸಂಗ್ರಹಣಾ ಅವಧಿಯಂತೆ ಮಾನದಂಡಗಳ ಪ್ರಕಾರ ಪಾವತಿಸಲಾಗುವುದು. ಎರಡನೇ ಹಂತದಲ್ಲಿ ತಾತ್ಕಾಲಿಕ ಕ್ಲೇಂ ಮತ್ತು ವಾಸ್ತವಿಕ ವೆಚ್ಚದ ವ್ಯತ್ಯಾಸವನ್ನು ಸಿ & ಎಜಿ ಯಿಂದ ಹಾಗೂ ಆರ್ಥಿಕ ಇಲಾಖೆಯಿಂದ ನೇಮಕಗೊಂಡ ವಿಶೇಷ ಲೆಕ್ಕಾಧಿಕಾರಿಗಳಿಂದ ಪರಿಶೋಧಿಸಿ, ದೃಢೀಕರಿಸಿದ ನಂತರ ಪಾವತಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 393 ವೆಚ್ಚ–5/2016, ದಿನಾಂಕ: 18.05.2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

**P.R. 478**
**S.C. 200**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಅರ್ಚನ ಎಂ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನ ಶಾಸ್ತ್ರ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ:** ಬ್ಯಾಂಕ್‌ಗಳಿಗೆ ಪ್ರತಿ ತಿಂಗಳ ಎರಡನೇ ಹಾಗೂ ನಾಲ್ಕನೇ ಶನಿವಾರಗಳಂದು ರಜೆ ಘೋಷಿಸಿರುವ ಹಿನ್ನೆಲೆಯಲ್ಲಿ ರಾಜ್ಯದ ಖಜಾನೆಗಳ ಕೆಲಸದ ದಿನಗಳು ಹಾಗೂ ವ್ಯವಹಾರದ ಅವಧಿಯನ್ನು ಮರುನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ:**
1. ಭಾರತ ಸರ್ಕಾರದ ಅಧಿಸೂಚನೆ ಸಂಖ್ಯೆ : FNo.4/1/7/2015-IR ದಿನಾಂಕ: 20.08.2015.
2. ನಿರ್ದೇಶಕರು, ಖಜಾನೆ ಇಲಾಖೆ ಇವರ ಪತ್ರ ಸಂಖ್ಯೆ: ಖನಿ/ಪ್ರಕ್ರಿಯೆ/85/2015–16 ದಿನಾಂಕ: 20.01.2016.

**ಪ್ರಸ್ತಾವನೆ:–**

ಮೇಲೆ (1) ರಲ್ಲಿ ಓದಲಾದ ಭಾರತ ಸರ್ಕಾರದ ದಿನಾಂಕ: 20.08.2015ರ ಅಧಿಸೂಚನೆಯಲ್ಲಿ ದೇಶದಲ್ಲಿನ ಬ್ಯಾಂಕ್‌ಗಳಿಗೆ ದಿ:01.09.2015 ರಿಂದ ಜಾರಿಗೆ ಬರುವಂತೆ ಪ್ರತಿ ತಿಂಗಳ ಎರಡನೇ ಹಾಗೂ ನಾಲ್ಕನೇ ಶನಿವಾರಗಳಂದು ಸಾರ್ವತ್ರಿಕ ರಜೆ ಎಂದು ಘೋಷಿಸಿದೆ. ನಿರ್ದೇಶಕರು, ಖಜಾನೆ ಇಲಾಖೆ ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 20.01.2016ರ ಪತ್ರದಲ್ಲಿ ಏಜೆನ್ಸಿ ಬ್ಯಾಂಕುಗಳೊಂದಿಗಿನ ಖಜಾನೆಗಳ ವ್ಯವಹಾರವು ಖಜಾನೆಗಳ ವ್ಯವಹಾರದ ಒಂದು ಭಾಗವಾಗಿದ್ದು ಉಳಿದಂತೆ ವಿವಿಧ ಇಲಾಖಾ ಕಛೇರಿಗಳೊಂದಿಗಿನ ದೈನಂದಿನ ವ್ಯವಹಾರ, ಮಹಾಲೇಖಪಾಲರೊಂದಿಗಿನ ವ್ಯವಹಾರ ಮತ್ತು ಅಲ್ಪ ಪ್ರಮಾಣದಲ್ಲಿ ಸಾರ್ವಜನಿಕರೊಂದಿಗಿನ ವ್ಯವಹರಣೆ ಇರುತ್ತದೆ ಎಂದು ತಿಳಿಸಿದ್ದಾರೆ. ಖಜಾನೆ ಹೊರತುಪಡಿಸಿ ಇತರ ಇಲಾಖಾ ಕಛೇರಿಗಳಿಗೆ ಪ್ರತಿ ತಿಂಗಳ 2ನೇ ಶನಿವಾರದಂದು ಪೂರ್ಣ ದಿನದ ರಜೆ ಇರುತ್ತದೆ. ಆದರೆ, ಖಜಾನೆಗಳು ಮಾತ್ರ ಈಗಲೂ ಸಹ ಪ್ರತಿ ಶನಿವಾರ ಬೆಳಿಗ್ಗೆ 10–30 ರಿಂದ ಅಪರಾಹ್ನ 12 ಗಂಟೆಯವರೆಗೆ ಕಾರ್ಯ ನಿರ್ವಹಿಸುತ್ತಿದ್ದು ಖಜಾನೆಗಳಿಗೆ 2ನೇ ಶನಿವಾರ ರಜೆ ಇರುವುದಿಲ್ಲ ಎಂದು ತಿಳಿಸಿದ್ದಾರೆ.

ಎಲ್ಲಾ ಏಜೆನ್ಸಿ ಬ್ಯಾಂಕುಗಳಿಗೆ ಪ್ರತಿ ತಿಂಗಳ 2ನೇ ಶನಿವಾರದಂದು ರಜೆ ಇದ್ದು, ಆ ದಿನದಂದು ಯಾವುದೇ ಸಾರ್ವಜನಿಕ ವ್ಯವಹಾರ ಇರುವುದಿಲ್ಲ, ಆದ್ದರಿಂದ ರಾಜ್ಯದ ಎಲ್ಲಾ ಜಿಲ್ಲಾ ಖಜಾನೆ ಹಾಗೂ ಉಪ ಖಜಾನೆಗಳಿಗೂ ಅನ್ವಯಿಸಿ ಪ್ರತಿ ತಿಂಗಳ 2ನೇ ಶನಿವಾರ ಸಾರ್ವತ್ರಿಕ ರಜೆಯನ್ನಾಗಿ ಘೋಷಿಸುವಂತೆ ಕೋರಿದ್ದಾರೆ. ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

ಸರ್ಕಾರದ ಆದೇಶ ಸಂಖ್ಯೆ: ಆಇ 193 ಆಖಇ 2015 ಬೆಂಗಳೂರು, ದಿನಾಂಕ: 04.06.2016

ಕರ್ನಾಟಕ ಖಜಾನೆ ಸಂಹಿತೆ 1958ರ ಅನುಚ್ಛೇದ 18(ಎ)ಗೆ ತಿದ್ದುಪಡಿ ತರುವುದನ್ನು ಬಾಕಿ ಇಟ್ಟು ಸರ್ಕಾರವು ದಿನಾಂಕ: 01.06.2016 ರಿಂದ ಜಾರಿಗೆ ಬರುವಂತೆ ರಾಜ್ಯದಲ್ಲಿನ ಖಜಾನೆಗಳಿಗೆ ಪ್ರತಿ ತಿಂಗಳ ಎರಡನೇ ಶನಿವಾರದಂದು ರಜೆ ಎಂದು ಘೋಷಿಸಿದೆ.

ಇನ್ನುಳಿದ ಶನಿವಾರಗಳಂದು ಖಜಾನೆಗಳ ವ್ಯವಹಾರದ ವೇಳೆಯನ್ನು ಬೆಳಿಗ್ಗೆ 10.30 ರಿಂದ ಅಪರಾಹ್ನ 2.30 ಗಂಟೆಯವರೆಗೆ ಹಾಗೂ ಕಛೇರಿ ಕೆಲಸದ ಅವಧಿಯನ್ನು ಬೆಳಿಗ್ಗೆ 10.00 ಗಂಟೆಯಿಂದ ಸಂಜೆ 5.30 ರವರೆಗೆ ನಿರ್ವಹಿಸುವಂತೆ ಈ ಮೂಲಕ ಆದೇಶಿಸಲಾಗಿದೆ.

ಮೇಲಿನ ಈ ಆದೇಶವನ್ನು ಅನುಸರಿಸಿ ಕರ್ನಾಟಕ ಖಜಾನೆ ಸಂಹಿತೆ 1958ರ ಅನುಚ್ಛೇದ 18(ಎ)ಗೆ ತಿದ್ದುಪಡಿ ತರಲು ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲಾಗುವುದು.

**P.R.438**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಉಪ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಸಮನ್ವಯ)

**ಇಂಧನ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಇಎನ್ 42 ಇಇಬಿ 2016 ಬೆಂಗಳೂರು, ದಿನಾಂಕ: 07.06.2016.**

ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಮಂಗಳೂರು ಇದರ ನಿರ್ದೇಶಕ ಮಂಡಳಿಗೆ ನಿರ್ದೇಶಕರನ್ನಾಗಿ ನೇಮಿಸಿ ಹೊರಡಿಸಿರುವ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಎನ್ 42 ಇಇಬಿ 2016 ದಿನಾಂಕ: 07.05.2016ರ ಕ್ರಮ ಸಂಖ್ಯೆ (2)ರ ಕಲಂ 2ರಲ್ಲಿ **"ಶ್ರೀಮತಿ ಪ್ರಿಯಾಂಕ ಮೇರಿ ಫ್ರಾನ್ಸಿಸ್, ಭಾ.ಆ.ಸೇ.** ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ದಕಿಣ ಕನ್ನಡ ಜಿಲ್ಲೆ" ಎಂದು ನಮೂದಿಸಿರುವುದನ್ನು **"ಶ್ರೀಮತಿ ಪಿ.ಐ. ಶ್ರೀವಿದ್ಯಾ, ಭಾ.ಆ.ಸೇ.,** ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ದಕ್ಷಿಣ ಕನ್ನಡ ಜಿಲ್ಲೆ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

P.R.439

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ :** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**

1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್‌ಆರ್ 2002 ದಿನಾಂಕ 31.05.2002.
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್‌ಆರ್ 2002 ದಿನಾಂಕ 19.12.2002.
3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 2 ಟಿಎಫ್‌ಪಿ 2015 ದಿನಾಂಕ: 09.04.2015. (Delegation of Financial Powers)
4. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 4 ಟಿಎಫ್‌ಪಿ 2015 ದಿನಾಂಕ: 09.10.2015. (Delegation of Financial Powers)
5. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2016 ದಿನಾಂಕ: 19.01.2016. (Delegation of Financial Powers)
6. ಸರ್ಕಾರಿ ಆದೇಶ ಸಂಖ್ಯೆ: ಇಎನ್9 ಪಿಎಸ್‌ಆರ್ 2015 ದಿನಾಂಕ: 02.05.2015, 18.05.2015, 04.06.2015, 06.07.2015, 05.08.2015, 01.09.2015, 15.10.2015, 09.11.2015, 02.12.2015 ಮತ್ತು 18.02.2016.
7. ಪಿಂಚಣಿ ಮತ್ತು ಉಪದಾನ ಟ್ರಸ್ಟ್ ಪತ್ರ ಸಂಖ್ಯೆ: ಕೆಇಪಿಜಿಟಿ/ಪಿ14/2015-16/080-84 ದಿನಾಂಕ: 01.03.2016.

**ಪ್ರಸ್ತಾವನೆ :**

1. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಗಳದ್ದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಗಳದ್ದಲ್ಲವೆಂದು ತಿಳಿಸಲಾಗಿದೆ.
2. ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.
3. 2015-16ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ ಲೆಕ್ಕಶೀರ್ಷಿಕೆ "2801-80-101-1-13-106 (ಯೋಜನೇತರ)"ಯಡಿ ₹. 550.00 ಕೋಟಿಗಳನ್ನು ಒದಗಿಸಲಾಗಿರುತ್ತದೆ. ಇದರಲ್ಲಿ ಈಗಾಗಲೇ ₹. 503.00 ಕೋಟಿಗಳನ್ನು ಮೇಲೆ (6) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಬಿಡುಗಡೆ ಮಾಡಲಾಗಿದೆ.
4. ಮೇಲೆ (7) ರಲ್ಲಿ ಓದಲಾದ ಕವಿಪ್ರನಿನಿ ಮತ್ತು ವಿಸಂಕಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ನ ಪತ್ರದಲ್ಲಿ ಮಾರ್ಚ್ 2016ರ ಮಾಹೆಗೆ ₹. 74.00 ಕೋಟಿಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.
5. ಕವಿಪ್ರನಿನಿ ಮತ್ತು ವಿಸಂಕಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2015-16ನೇ ಸಾಲಿನ ಮಾರ್ಚ್ 2016ರ ಮಾಹೆಗೆ ಲೆಕ್ಕಶೀರ್ಷಿಕೆ "2801-80-101-1-13-106" ಸಹಾಯಧನ (ಯೋಜನೇತರ) ಅಡಿಯಲ್ಲಿ ₹. 47.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಇಎನ್ 9 ಪಿಎಸ್‌ಆರ್ 2015 ಬೆಂಗಳೂರು, ದಿನಾಂಕ: 03.03.2016**.

1. ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2015–16ನೇ ಸಾಲಿನ ಮಾರ್ಚ್ 2016ರ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ₹.47.00 ಕೋಟಿ (ನಲ್ವತ್ತೇಳು ಕೋಟಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate) ನ್ನು ಸಲ್ಲಿಸತಕ್ಕದ್ದು.
4. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2016 ಬೆಂಗಳೂರು ದಿನಾಂಕ: 19.01.2016ರಲ್ಲಿ ನಾಲ್ಕನೇ ತ್ರೈಮಾಸಿಕಕ್ಕೆ ಇಲಾಖಾ ಮುಖ್ಯಸ್ಥರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

**P.R.440**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನ ಹಾಗೂ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಮತ್ತು 2014–15ನೇ ಸಾಲಿನ ಬಾಕಿ ಸಹಾಯಧನ ಹಾಗೂ ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004 ದಿನಾಂಕ 15.03.2005.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ 04.09.2008.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2013 ದಿನಾಂಕ 17.05.2013.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015 ದಿನಾಂಕ: 29.04.2015. 18.05.2015, 01.06.2015(TA), 04.06.2015,01.07.2015, 03.08.2015, 01.09.2015, 15.10.2015, 03.12.2015, 05.12.2015, 10.12.2015, (TA), 23.01.2016, 04.02.2016 ಮತ್ತು 01.03.2016.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015/ಪಿ4 ದಿನಾಂಕ: 22.06.2015(TA), 21.07.2015(TA), 25.08.2015(TA), 28.09.2015 (TA), ಮತ್ತು 28.10.2015(TA),
6) ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2015 ದಿನಾಂಕ 22.06.2015.
7) ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015/ಪಿ2 ದಿನಾಂಕ: 04.01.2016(TA), 22.01.2016(TA), ಮತ್ತು 02.03.2016.

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ: 01–08–2008ರಿಂದ ಜಾರಿಗೆ ಬರುವಂತೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.
3. ಮೇಲಿನ ಕ್ರಮಾಂಕ–3ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ದಿನಾಂಕ 13.05.2013ಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ ಕುಟೀರಜ್ಯೋತಿ ಸ್ಥಾವರಗಳ ದಂಡ ಸಹಿತ ವಿದ್ಯುತ್ ಬಾಕಿ ಶುಲ್ಕ ₹. 319.61 ಕೋಟಿಗಳನ್ನು ಮನ್ನಾ ಮಾಡಲಾಗಿದೆ. ಇದರಲ್ಲಿ 2014–15ನೇ ಸಾಲಿನಲ್ಲಿ ₹. 213.07 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. 2015–16ನೇ ಸಾಲಿಗೆ ಆಯವ್ಯಯದಲ್ಲಿ ಒದಗಿಸಿರುವ ₹. 106.54 ಕೋಟಿಗಳಲ್ಲಿ ಮೇಲೆ ಕ್ರಮಾಂಕ–(4)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ₹. 106.54 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.
4. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015–16ನೇ ಸಾಲಿಗೆ ₹.7.197.16 ಕೋಟಿಗಳ ಸಹಾಯಧನವನ್ನು ನಿಗದಿಪಡಿಸಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4), (5), (6) ಮತ್ತು (7) ರಲ್ಲಿನ ಸರ್ಕಾರಿ ಆದೇಶಗಳಲ್ಲಿ 2015–16ನೇ ಸಾಲಿನ 02.03.2016ರವರೆಗೆ ಸಹಾಯಧನ ₹.5,806.07 ಕೋಟಿಗಳನ್ನು ಬಿಡುಗಡೆ ಮಾಡಿದೆ.

ಆಯೋಗದ ದರ ಆದೇಶ 2013ರಲ್ಲಿ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ₹.443.49 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ₹.100.46 ಕೋಟಿಗಳನ್ನು ಬಿಡುಗಡೆ ಮಾಡಿದೆ. ಇನ್ನು ₹.343.03 ಕೋಟಿಗಳನ್ನು ಮಾಡಬೇಕಾಗಿದೆ.

2014–15ನೇ ಸಾಲಿನ ಬಾಕಿ ಸಹಾಯಧನ ರೂ. 408.56 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ₹..91.61 ಕೋಟಿಗಳನ್ನು ಬಿಡುಗಡೆ ಮಾಡಿದ್ದು, ಇನ್ನು ₹.316.95 ಕೋಟಿಗಳ ಬಾಕಿ ಬಿಡುಗಡೆ ಮಾಡಬೇಕಾಗಿದೆ.

5. 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹.7,197.16 ಕೋಟಿಗಳಲ್ಲಿ ಮಾರ್ಚ್ 2016ರ ಮಾಹೆಗೆ ಸಹಾಯಧನದ ಬಾಬ್ತು ₹.796.00 ಕೋಟಿಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಎಫ್‌ಡಿ 66 ವೆಚ್ಚ–1/16 ದಿನಾಂಕ 05.03.2016 ರಲ್ಲಿ ಸಹಮತಿ ನೀಡಿದೆ.

6. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2015–16ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ–7ರ ಪುಟ ಸಂಖ್ಯೆ–78ರಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ₹.7,498.00 ಕೋಟಿಗಳನ್ನು ಒದಗಿಸಲಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4), (5), (6) ಮತ್ತು (7)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ಒಟ್ಟು ₹.5,806.07 ಕೋಟಿಗಳನ್ನು ಬಿಡುಗಡೆ ಮಾಡಿದೆ. ವಿವರ ಈ ಕೆಳಕಂಡಂತಿದೆ.

**₹.ಕೋಟಿಗಳು.**

| | |
|---|---|
| 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹. 7.197.16 ಕೋಟಿಗಳಲ್ಲಿ ನಗದು ರೂಪವಾಗಿ ನೀರಾವರಿ ಪಂಪುಸೆಟ್ಟು, ಭಾಗ್ಯಜ್ಯೋತಿ/ಕುಟೀರ ಜ್ಯೋತಿ ಸ್ಥಾವರಗಳ ಉಚಿತ ವಿದ್ಯುತ್ ಸರಬರಾಜಿಗಾಗಿ ಸಹಾಯಧನ ಬಾಬ್ತು. | 4,600.00 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನದ ಬಾಬ್ತು. | 100.46 |
| 2014–15ನೇ ಸಾಲಿನ ಬಾಕಿ ಸಹಾಯಧನ ಬಾಬ್ತು. | 91.61 |
| ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು. | 106.54 |
| ತ್ರಿಪಕ್ಷೀಯ ಹೊಂದಾಣಿಕೆ–ಏಪ್ರಿಲ್ 2015 ರಿಂದ ಜನವರಿ 2016ರ ಮಾಹೆಯವರೆಗೆ ವಿದ್ಯುತ್ ತೆರಿಗೆ ವಸೂಲಿ ಮತ್ತು ರಾಜಧನ ಬಾಬ್ತು. | 905.46 |
| ಸಹಾಯ ಧನದ ರೂಪದಲ್ಲಿ ಶ್ರೀ ಸತ್ಯ ಸಾಯಿ ಆಸ್ಪತ್ರೆಯ ವಿದ್ಯುತ್ ಬಿಲ್ಲಿನ ಬಾಬ್ತನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ. | 2.00 |
| 02.03.2016 ರವರೆಗೆ ಬಿಡುಗಡೆ ಮಾಡಿರುವ ಒಟ್ಟು ಮೊತ್ತ. | 5,806.07 |

7. ಮಾರ್ಚ್ 2016ರ ಮಾಹೆಗೆ ವಿಸಕಂಗಳಿಗೆ ₹.796.00 ಸಹಾಯಧನವನ್ನು ಬಿಡುಗಡೆ ಮಾಡಲು ಪ್ರಸ್ತಾಪಿಸಿದ್ದು, ಅದರಂತೆ ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 6 ಪಿಎಸ್‌ಆರ್ 2015/ಪಿ2 ಬೆಂಗಳೂರು, ದಿನಾಂಕ 08.03.2016.**

1. ಸರ್ಕಾರವು ಭಾಗ್ಯಜ್ಯೋತಿ / ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ 2015–16ನೇ ಸಾಲಿನ ಮಾರ್ಚ್ 2016ರ ಮಾಹೆಗೆ ₹.796.00 ಕೋಟಿಗಳ (₹.ಏಳುನೂರು ತೊಂಬತ್ತಾರು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106" (ಸಹಾಯಧನ) (ಯೋಜನೇತರ) ಅಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

**₹. ಕೋಟಿಗಳಲ್ಲಿ**

| ವಿದ್ಯುತ್ ಸರಬರಾಜು ಕಂಪನಿಗಳು | 10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | 2015–16ರ ಮಾರ್ಚ್ 2016 ಮಾಹೆಗೆ ಬಿಡುಗಡೆ |
|---|---|---|
| ಬೆವಿಕಂ | 165.00 | 165.00 |
| ಮವಿಕಂ | 60.00 | 60.00 |
| ಹುವಿಕಂ | 269.61 | 269.61 |
| ಗುವಿಕಂ | 160.00 | 160.00 |
| ಚಾವಿಸನಿನಿ | 125.00 | 125.00 |
| ಹು.ಗ್ರಾ.ಸ.ಸಂ | 16.39 | 16.39 |
| **ಒಟ್ಟು** | **796.00** | **796.00** |

2. ಮೇಲಿನ ಆದೇಶ ಭಾಗದ ಕಂಡಿಕೆ 1ರಲ್ಲಿ ಬಿಡುಗಡೆ ಮಾಡಿರುವ ಸಹಾಯಧನವನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಮರುಹಂಚಿಕೆ ಮಾಡಿ ಆದೇಶಿಸಿದೆ.

₹. ಕೋಟಿಗಳಲ್ಲಿ

| ವಿದ್ಯುತ್ ಸರಬರಾಜು ಕಂಪನಿಗಳು | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂಗಳಿಗೆ | ಒಟ್ಟು |
|---|---|---|---|
| ಬೆವಿಕಂ | 165.00 | 0.00 | 165.00 |
| ಮವಿಕಂ | 60.00' | 0.00 | 60.00 |
| ಹುವಿಕಂ | 105.00 | 164.61 | 269.61 |
| ಗುವಿಕಂ | 120.00 | 40.00 | 160.00 |
| ಚಾವಿಸನಿನಿ | 50.00 | 75.00 | 125.00 |
| ಹು.ಗ್ರಾ.ಸ.ಸಂ | 0.00 | 16.39 | 16.39 |
| **ಒಟ್ಟು** | **500.00** | **296.00** | **796.00** |

3. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ₹.105.00 ಕೋಟಿಗಳಲ್ಲಿ ₹.100.00 ಕೋಟಿಗಳನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಎನರ್ಜಿ ಬ್ಯಾಲೆನ್ಸಿಂಗ್ ಹೊಂದಾಣಿಕೆ (Energy Balancing Adjustment) ಮೊತ್ತಕ್ಕೆ ಸರಿಹೊಂದಿಸಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ವಿದ್ಯುತ್ ಖರೀದಿ ವೆಚ್ಚಕ್ಕೆ ಬಿಡಗಡೆ ಮಾಡಿ ಆದೇಶಿಸಿದೆ.
4. ಹುಕ್ಕೇರಿ ಗ್ರಾಮೀಣ ಸಹಕಾರ ಸಂಘಕ್ಕೆ ಬಿಡುಗಡೆ ಮಾಡಿರುವ ಸಹಾಯಧನ ₹.16.39 ಕೋಟಿಗಳನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ಖರೀದಿ ಮಾಡಿರುವ ವಿದ್ಯುತ್ ವೆಚ್ಚದ ಬಾಬ್ತು ಹೊಂದಾಣಿಕೆ ಮೂಲಕ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ.
5. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ₹.500.00 ಕೋಟಿಗಳನ್ನು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ₹.181.00 ಕೋಟಿಗಳನ್ನು, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ₹.40.00 ಕೋಟಿಗಳನ್ನು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ₹.75.00 ಕೋಟಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.
6. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳು ಹಣ ಸ್ವೀಕೃತಿ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು, ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.
7. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.
8. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.
9. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳನ್ನು, ವಿಸಕಂಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ ಮನ್ನಾ ಮಾಡಿರುವ ಮೊತ್ತದ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
10. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 66 ವೆಚ್ಚ–1/16 ದಿನಾಂಕ 05.03.2016ರಲ್ಲಿ ನೀಡಿರುವ ಸಹಮತಿಯನ್ವಯ ಸಹಾಯಧನ ಬಿಡುಗಡೆ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**P.R.441**

## ಇಂಧನ ಸಚಿವಾಲಯ

**ವಿಷಯ :** 2015–16ನೇ ಸಾಲಿನಲ್ಲಿ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿನವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ತ್ರಿಪಕ್ಷೀಯ ಹೊಂದಾಣಿಕೆಯ (Tripartite Adjustment) ಮೂಲಕ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಇಎನ್ 55 ಪಿಎಸ್‌ಆರ್ 2008 ದಿನಾಂಕ 04.09.2008.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2013 ದಿನಾಂಕ 17.05.2013.

3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್ಆರ್ 2015 ದಿನಾಂಕ 29.04.2015, 18.05.2015. 01.06.2015(TA),, 04.06.2015, 01.07.2015, 03.08.2015, 01.09.2015, 15.10.2015, 03.12.2015, 05.12.2015, 10.12.2015(TA), 23.01.2016, 04.02.2016, ಮತ್ತು 01.03.2016.
4. ಸರ್ಕಾರಿ ಆದೇಶ ಸಂಖ್ಯೆ:ಇಎನ್ 55 ಪಿಎಸ್ಆರ್ 2008 ದಿನಾಂಕ 04.09.2008.
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್ಆರ್ 2013 ದಿನಾಂಕ 17.05.2013.
6. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್ಆರ್ 2015/ಪಿ2 ದಿನಾಂಕ 04.01.2016(TA), 22.01.2016(TA), ಮತ್ತು 02.03.2016. (TA) ಮತ್ತು 08.03.2016.

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ–1ರ ಓದಲಾದ ಸರ್ಕಾರಿ ಆದೇಶದಲ್ಲಿ ನಿಗಧಿಪಡಿಸಿರುವ ನಿಬಂಧನೆ ಮತ್ತು ಷರತ್ತುಗಳಿಗೊಳಪಟ್ಟು ದಿನಾಂಕ: 01.08.2008 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆಯ ಮೊತ್ತವನ್ನು ಸರ್ಕಾರದಿಂದ ಮರುಪಾವತಿ ಮಾಡುವುದಕ್ಕೆ ಅನುಮೋದನೆ ನೀಡಲಾಗಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ವಲಯದ ಕಂಪನಿಗಳಾದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಹಾಗೂ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆಯನ್ನು ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನದ ಬಾಬ್ತಿಗೆ ವರ್ಷಾವಾರು ಸರಿಹೊಂದಿಸುವ ನೀತಿ ಮೊದಲಿನಿಂದಲೂ ವಾಡಿಕೆಯಲ್ಲಿದೆ.
3. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015–16ನೇ ಸಾಲಿಗೆ ₹.7197.16 ಕೋಟಿಗಳನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನವನ್ನಾಗಿ ಬಿಡುಗಡೆ ಮಾಡಲು ನಿಗದಿಪಡಿಸಿದೆ. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ದರ ಆದೇಶ 2013 ರಲ್ಲಿ, 2011–12ನೇ ಸಾಲಿಗೆ ₹.443.49 ಕೋಟಿಗಳಷ್ಟು ಹೆಚ್ಚುವರಿ ಸಹಾಯಧನವನ್ನು ಅನುಮೋದಿಸಿದೆ. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2014ರ ದರ ಆದೇಶದಲ್ಲಿ 2014–15ನೇ ಸಾಲಿಗೆ ₹.6391.56 ಕೋಟಿಗಳ ಸಹಾಯಧನವನ್ನು ನಿಗಧಿಪಡಿಸಿತ್ತು. ಇದರಲ್ಲಿ ₹.5983.00 ಕೋಟಿಗಳನ್ನು ಬಿಡುಗಡೆ ಮಾಡಿದೆ. ಇನ್ನೂ ₹.408.56 ಕೋಟಿಗಳ ಬಾಕಿ ಸಹಾಯಧನ ಬಿಡುಗಡೆ ಮಾಡಬೇಕಾಗಿದೆ.
4. ಆರ್ಥಿಕ ವರ್ಷ 2015–16ನೇ ಸಾಲಿನ ಆಯವ್ಯಯದಲ್ಲಿ ₹.7498.00 ಕೋಟಿಗಳ ಸಹಾಯಧನವನ್ನು ಒದಗಿಸಿದೆ. ಇದರಲ್ಲಿ ಮೇಲೆ ಓದಲಾದ (3), (4) ಮತ್ತು (5) ಮತ್ತು (6)ರ ಸರ್ಕಾರಿ ಆದೇಶಗಳಲ್ಲಿ 2015–16ನೇ ಸಾಲಿನ 08.03.2016ರವರೆಗೆ ₹.6,602.07 ಕೋಟಿಗಳನ್ನು ಈಗಾಗಲೇ ಈ ಕೆಳಕಂಡಂತೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಲಾಗಿದೆ.

**₹.ಕೋಟಿಗಳಲ್ಲಿ**

| | |
|---|---|
| 2015–16ನೇ ಸಾಲಿನ ಏಪ್ರಿಲ್–2015 ರಿಂದ ಮಾರ್ಚ್ 2016ರ ವರೆಗೆ ಬಿಡುಗಡೆ ಮಾಡಿರುವ ಸಹಾಯಧನ | 5,396.00 |
| ದಿನಾಂಕ 13.05.2013ರ ಅಂತ್ಯಕ್ಕೆ ಬಾಕಿ ಇದ್ದ ಭಾಗ್ಯ ಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳ ದಂಡಸಹಿತ ಬಾಕಿ ಮೊತ್ತದಲ್ಲಿ ಬಿಡುಗಡೆ ಮಾಡಿರುವ ಹಣ. | 106.54 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು | 100.46 |
| 2014–15 ನೇ ಸಾಲಿನ ಬಾಕಿ ಸಹಾಯಧನ ಬಾಬ್ತು | 91.61 |
| ತ್ರಿಪಕ್ಷೀಯ ಹೊಂದಾಣಿಕೆ–2015–16ನೇ ಸಾಲಿನ ಜನವರಿ 2016ರ ಅಂತ್ಯಕ್ಕೆ ವಿದ್ಯುತ್ ತೆರಿಗೆ ವಸೂಲಿ ಮತ್ತು ರಾಜಧನ ಬಾಬ್ತು | 905.46 |
| ಸಹಾಯಧನದ ರೂಪದಲ್ಲಿ ಶ್ರೀ ಸತ್ಯ ಸಾಯಿ ಆಸ್ಪತ್ರೆಯ ವಿದ್ಯುತ್ ಬಿಲ್ಲಿನ ಬಾಬ್ತನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ. | 2.00 |
| **ಒಟ್ಟು 08.03.2016ರವರೆಗೆ ಬಿಡುಗಡೆ ಮಾಡಿದ ಸಹಾಯಧನ** | **6,602.07** |

5. 2015–16ನೇ ಸಾಲಿನಲ್ಲಿ ಜನವರಿ 2016ರ ಅಂತ್ಯದವರೆಗೆ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಸರಿಹೊಂದಿಸಿರುವ ಮೊತ್ತದ ವಿವರ ಈ ಕೆಳಕಂಡಂತಿದೆ.

(₹.ಕೋಟಿಗಳಲ್ಲಿ)

| **ವಿಸಕಂ** | **ಬೆವಿಕಂ** | **ಮವಿಕಂ** | **ಹುವಿಕಂ** | **ಗುವಿಕಂ** | **ಚಾವಿಸನಿನಿ** | **ಕವಿಪ್ರನಿನಿ** | | **ಕವಿನಿನಿ** | | **ಒಟ್ಟು** |
|---|---|---|---|---|---|---|---|---|---|---|
| | ವಿದ್ಯುತ್ ತೆರಿಗೆ | | | | | ವಿದ್ಯುತ್ ತೆರಿಗೆ | (APDRP Principale & Interest) | ವಿದ್ಯುತ್ ತೆರಿಗೆ | ರಾಜಧನ | |
| ಏಪ್ರಿಲ್–15 | 63.26 | 8.15 | 8.71 | 6.90 | 8.50 | 0.00 | 0.00 | 0.57 | 3.91 | **100.00** |

| ವಿಸಕಂ | ಬೆವಿಕಂ | ಮವಿಕಂ | ಹುವಿಕಂ | ಗುವಿಕಂ | ಚಾವಿಸನಿನಿ | ಕವಿಪ್ರನಿನಿ | | ಕವಿನಿನಿ | | ಒಟ್ಟು |
|---|---|---|---|---|---|---|---|---|---|---|
| | ವಿದ್ಯುತ್ ತೆರಿಗೆ | | | | | ವಿದ್ಯುತ್ ತೆರಿಗೆ | (APDRP Principale & Interest) | ವಿದ್ಯುತ್ ತೆರಿಗೆ | ರಾಜಧನ | |
| ಮೇ–15 | 60.47 | 9.06 | 11.88 | 8.14 | 6.80 | 0.00 | 0.00 | 0.61 | 3.04 | **100.00** |
| ಜೂನ್–15 | 63.77 | 8.45 | 10.58 | 8.28 | 6.50 | 0.00 | 0.00 | 0.50 | 1.92 | **100.00** |
| ಜುಲೈ–15 | 58.07 | 8.55 | 9.66 | 8.83 | 5.00 | 0.00 | 0.00 | 0.54 | 3.68 | **94.33** |
| ಆಗಸ್ಟ್–15 | 52.27 | 8.25 | 7.95 | 6.41 | 6.84 | 0.00 | 0.00 | 0.47 | 4.91 | **87.10** |
| ಸೆಪ್ಟೆಂಬರ್–15 | 51.76 | 3.93 | 10.30 | 8.81 | 5.74 | 0.00 | 0.00 | 0.47 | 1.92 | **82.93** |
| ಅಕ್ಟೋಬರ್–15 | 48.83 | 7.61 | 12.03 | 7.27 | 6.60 | 0.00 | 0.00 | 0.55 | 1.07 | **83.96** |
| ನವೆಂಬರ್–15 | 49.25 | 8.09 | 10.02 | 7.09 | 7.25 | 0.00 | 0.00 | 0.50 | 0.65 | **82.85** |
| ಡಿಸೆಂಬರ್–15 | 46.68 | 7.15 | 5.38 | 12.33 | 8.20 | 0.00 | 0.00 | 0.56 | 0.95 | **81.25** |
| ಜನವರಿ–16 | 51.94 | 9.05 | 9.66 | 8.88 | 9.85 | 0.18 | 1.10 | 0.57 | 1.81 | **93.04** |
| **ಒಟ್ಟು** | **546.30** | **78.29** | **96.17** | **82.94** | **71.28** | **0.18** | **1.10** | **5.34** | **23.86** | **905.46** |

6. 2015–16ನೇ ಸಾಲಿನ ಫೆಬ್ರವರಿ 2016ರ ಮಾಹೆಗೆ ವಿದ್ಯುತ್ ಸರಬರಾಜು ಕಂಪನಿಗಳು ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಹಾಗೂ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಸರ್ಕಾರಕ್ಕೆ ಪಾವತಿಸಬೇಕಾದ ವಿದ್ಯುತ್ ತೆರಿಗೆ ಮತ್ತು ರಾಜಧನದ ಮೊತ್ತ ₹.87.42 ಕೋಟಿಗಳನ್ನು ಈ ಕೆಳಗೆ ವಿವರಿಸಿರುವಂತೆ ತ್ರಿಪಕ್ಷೀಯ ಹೊಂದಾಣಿಕೆ (Tripartite Adjustment) ಮೂಲಕ ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನಕ್ಕೆ ಹೊಂದಾಣಿಕೆ ಮೂಲಕ ಸರಿಹೊಂದಿಸಲು ಪ್ರಸ್ತಾಪಿಸಿದೆ.

**ರೂ. ಕೋಟಿಗಳಲ್ಲಿ**

| ಕ್ರ.ಸಂ | ವಿಸಕಂ | ಫೆಬ್ರವರಿ 2016 |
|---|---|---|
| 1 | ಬೆವಿಕಂ | 48.20 |
| 2 | ಮವಿಕಂ | 9.82 |
| 3 | ಹುವಿಕಂ | 9.80 |
| 4 | ಗುವಿಕಂ | 10.36 |
| 5 | ಚಾವಿಸನಿನಿ | 6.50 |
| 6 | ಕವಿನಿನಿ | 0.48 |
| | **ಒಟ್ಟು** | **85.16** |
| 7 | ಕವಿನಿನಿ (ರಾಜಧನ) | 2.26 |
| | **ಒಟ್ಟು** | **87.42** |

7. ಮೇಲೆ ವಿವರಿಸಿರುವಂತೆ, ಫೆಬ್ರವರಿ 2016ರ ಮಾಹೆಯಲ್ಲಿ ವಸೂಲಾಗಿರುವ ವಿದ್ಯುತ್ ತೆರಿಗೆ ಮತ್ತು ರಾಜಧನ ಮೊತ್ತದ ಬಾಬ್ತು ₹.87.42 ಕೋಟಿಗಳನ್ನು ತ್ರಿಪಕ್ಷೀಯ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 06 ಪಿಎಸ್‌ಆರ್ 2015/ಪಿ2 ಬೆಂಗಳೂರು, ದಿನಾಂಕ: 17.03.2016.**

1. 2015–16ನೇ ಸಾಲಿನ ಫೆಬ್ರವರಿ 2016ರ ಮಾಹೆಗೆ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ, ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಬಾಬ್ತು ₹.84.68 ಕೋಟಿಗಳನ್ನು **(ಎಂಬತ್ನಾಲ್ಕು ಕೋಟಿ ಅರವತ್ತೆಂಟು ಲಕ್ಷ ₹..ಗಳು ಮಾತ್ರ)** ವಿದ್ಯುತ್ ಸರಬರಾಜು ಕಂಪನಿಗಳು, 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಸರಿಹೊಂದಿಸಿ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ.

A: ESCOM's PORTION **(₹.. In Crs)**

| **DEBIT** | | **CREDIT** | |
|---|---|---|---|
| **Head of Account** | **Amount** | **Head of Account** | **Amount** |
| **Subsidy to ESCOMs** | | **Electricity Tax collection** | |
| 2801-80-101-1-04-106 | | 0043-00-101-0-01 | |
| BESCOM | 48.20 | BESCOM | 48.20 |
| MESCOM | 9.82 | MESCOM | 9.82 |
| HESCOM | 9.80 | HESCOM | 9.80 |
| GESCOM | 10.36 | GESCOM | 10.36 |
| CESC | 6.50 | CESC | 6.50 |
| **Total** | **84.68** | **Total** | **84.68** |

2. 2015–16ನೇ ಸಾಲಿನ ಫೆಬ್ರವರಿ 2016ರ ಮಾಹೆಗೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಮತ್ತು ರಾಜಧನ ₹.2.74 ಕೋಟಿಗಳನ್ನು ಸಹ ಸರ್ಕಾರವು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಠಕದಲ್ಲಿರುವಂತೆ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ. ಕವಿನಿನಿ ಮತ್ತು ಗುಲ್ಬರ್ಗಾ ಸಂಸ್ಥೆಗಳು ವಿದ್ಯುತ್ ಖರೀದಿ ಅಸಲಿಗೆ ಲೆಕ್ಕೀಕರಿಸಲು ಆದೇಶಿಸಿದೆ.

**B:KPCL Portion** (Rs. In Crs)

| **DEBIT** | | **CREDIT** | |
|---|---|---|---|
| **Head of Account** | **Total Amount** | **Head of Account** | **Total Amount** |
| **Subsidy to ESCOMs** | | **Royalty from KPCL** | |
| 2801-80-101-1-04-106 | | 0801-01-201-0-01 | 2.26 |
| GESCOM | 2.74 | | |
| | | Electricity Tax | |
| (KPCL to adjust This receipt against power purchase cost of GESCOM) | | 0043-00-101-0-01 | 0.48 |
| TOTAL- (B) | 2.74 | TOTAL –(B) | 2.74 |

3. ಲೆಕ್ಕ ಮಹಾಪರಿಶೋಧಕರು ಈ ಹೊಂದಾಣಿಕೆಗಳನ್ನು ಸಂಪೂರ್ಣವಾಗಿ ಲೆಕ್ಕಕ್ಕೆ ತೆಗೆದುಕೊಳ್ಳುವಂತೆ ಕೋರಿದೆ. ಈ ಆದೇಶದ ಪ್ರಕಾರ ಯಾವುದೇ ನಗದು ಬಿಡುಗಡೆ ಇರುವುದಿಲ್ಲ.
4. ಈ ಸರ್ಕಾರಿ ಆದೇಶದಲ್ಲಿ ಆದೇಶಿಸಿರುವಂತೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಮುಖ್ಯ ವಿದ್ಯುತ್ ಪರಿವೀಕ್ಷಕರು ಆ ಸಂಸ್ಥೆಗಳ ದಸ್ತಾವಾಜುಗಳಲ್ಲಿ ಸಮರ್ಪಕ ಹೊಂದಾಣಿಕೆ ಮಾಡಿಕೊಳ್ಳಲು ಆದೇಶಿಸಿದೆ.
5. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ತೆರಿಗೆ ಮತ್ತು ರಾಜಸ್ವ ₹. 2.74 ಕೋಟಿಗಳನ್ನು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಸಹಾಯಧನವಾಗಿ ಸರಿಹೊಂದಿಸಲು ಸೂಚಿಸಿದೆ. ಈ ಮೊತ್ತವನ್ನು ವಿದ್ಯುತ್ ಖರೀದಿ ಅಸಲು ವೆಚ್ಚಕ್ಕೆ ಲೆಕ್ಕೀಕರಿಸುವುದು.
6. ಈ ಆದೇಶದಲ್ಲಿ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಿರುವ ಸಹಾಯಧನವನ್ನು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಸಹಾಯಧನದ ಬಾಬ್ತಿಗೆ ಬಿಡುಗಡೆ ಮಾಡಿದೆ ಎಂದು ಪರಿಗಣಿಸುವುದು.
7. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1466 ವೆಚ್ಚ–1/15 ದಿನಾಂಕ: 20.01.2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 442**

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ:** 2015–16ನೇ ಸಾಲಿನಲ್ಲಿ ವಿದ್ಯುತ್ ಕ್ಷೇತ್ರದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1. 2015–16ನೇ ಸಾಲಿನ ಆಯವ್ಯಯ ಹಂಚಿಕೆ.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್ಆರ್ 2015/ಪಿ1 ದಿನಾಂಕ: 18.06.2015. 31.10.2015. ಮತ್ತು 25.01.2016.

3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015 ದಿನಾಂಕ 20.06.2015. 01.09.2015, 09.11.2015, 24.02.2016 ಮತ್ತು 29.02.2016.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015/ಪಿ1 ದಿನಾಂಕ: 03.12.2015.
5. ಕವಿಪ್ರನಿನಿ ಪತ್ರ ಸಂಖ್ಯೆ: ಕವಿಪ್ರನಿನಿ/ವ್ಯನಿ/ಆಕಾ/ಆಸ(ಲೆ&ಸಂ)/ಕೆಸಿಐ–30/14398/2009–10/83 ದಿನಾಂಕ: 09.10.2015.
6. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 214 ಬಿಆರ್‌ಎಸ್ 2015 ದಿನಾಂಕ 14.03.2016.

**ಪ್ರಸ್ತಾವನೆ :**

1) ಮೇಲಿನ ಕ್ರ.ಸಂ–1ರಲ್ಲಿ ಓದಲಾದ 2015–16ನೇ ಸಾಲಿನ ಆಯವ್ಯಯದಲ್ಲಿ ₹.677.83 ಕೋಟಿಗಳನ್ನು ಇಂಧನ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ, ಲೆಕ್ಕಶೀರ್ಷಿಕೆ 4801–01–190–0–09–211 (ಯೋಜನೆ)ಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ–ಬಂಡವಾಳ ಹೂಡಿಕೆಗಾಗಿ ₹.677.83 ಕೋಟಿಗಳನ್ನು, ಬಂಡವಾಳವಾಗಿ ಒದಗಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ 6ರ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 214 ಬಿಆರ್‌ಎಸ್ 2015 ದಿನಾಂಕ 14.03.2016ರಲ್ಲಿ 2015–16ನೇ ಸಾಲಿಗೆ ಹೆಚ್ಚುವರಿಯಾಗಿ ಲೆಕ್ಕ ಶೀರ್ಷಿಕೆ "4801–01–190–0–09–211 Investment in power Utilities (ಯೋಜನೆ)" ವಿದ್ಯುತ್ ಬಳಕೆಯಲ್ಲಿ ಬಂಡವಾಳ ಹೂಡಿಕೆಯಡಿ ₹.22.00 ಕೋಟಿಗಳ ಬಂಡವಾಳವನ್ನು ಮಂಜೂರು ಮಾಡಿದೆ.

2) ಮೇಲಿನ ಕ್ರಮ ಸಂಖ್ಯೆ 2 ರಲ್ಲಿ ಓದಲಾದ ಆದೇಶದ ಪ್ರಕಾರ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ1–A ರಲ್ಲಿ ಪ್ರದತ್ತವಾದ ಅಧಿಕಾರದಂತೆ ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4)ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಖಜಾನೆಯಿಂದ ನಾಲ್ಕನೇ ತ್ರೈಮಾಸಿಕಕ್ಕೆ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ ವಿನಾಯಿತಿ ನೀಡಿ ಆದೇಶಿಸಲಾಗಿದೆ.

3) ಮೇಲಿನ ಕ್ರಮ ಸಂಖ್ಯೆ 3 ಮತ್ತು 4 ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ 2015–16ನೇ ಸಾಲಿಗೆ ಲೆಕ್ಕಶೀರ್ಷಿಕೆ 4801–01–190–0–09–211 (ಯೋಜನೆಯಡಿ ವಿದ್ಯುಚ್ಛಕ್ತಿ ಬಳಕೆಯಲ್ಲಿ ಬಂಡವಾಳ ಹೂಡಿಕೆಗಾಗಿ ಈವರೆವಿಗೆ ₹.677.83 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

4) M/s Hindustan Aeronautics Limited (HAL) ರವರು ಬಿದರೆಹಳ್ಳಿ ಕಾವಲ್, ನಿಟ್ಟೂರು ಹೋಬಳಿ ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆಯಲ್ಲಿ "A Green Field Project" ಹೆಲಿಕಾಪ್ಟರ್ ಘಟಕದ ಸ್ಥಾಪನೆಗೆ ವಿದ್ಯುತ್ ಪ್ರಸರಣ ಮಾರ್ಗಗಳನ್ನು ಸ್ಥಳಾಂತರ ಮಾಡಲು ಕವಿಪ್ರನಿನಿಗೆ ಬಂಡವಾಳ ಒದಗಿಸುವಂತೆ ಕೋರಿರುವ ಮೊತ್ತವನ್ನು ಸಚಿವ ಸಂಪುಟ ಅನುಮೋದಿಸಿರುವುದರ ಹಿನ್ನಲೆಯಲ್ಲಿ ಹಾಗೂ ಆರ್ಥಿಕ ಇಲಾಖೆ ಈಗಾಗಲೆ 2015–16ನೇ ಸಾಲಿಗೆ ಒದಗಿಸಿರುವ ಬಂಡವಾಳದಲ್ಲಿ ಬಿಡುಗಡೆ ಮಾಡಲು ಸಮ್ಮತಿಸಿರುವುದರಿಂದ ₹.65.00 ಕೋಟಿಗಳನ್ನು ಈ ಯೋಜನೆಯ ಅನುಷ್ಠಾನಕ್ಕಾಗಿ ಕವಿಪ್ರನಿನಿಗೆ ಬಿಡುಗಡೆ ಮಾಡಲಾಗಿದೆ. ಆದಾಗ್ಯೂ ಪೂರಕ ಅಂದಾಜಿನಲ್ಲಿ ಆರ್ಥಿಕ ಇಲಾಖೆಯು ಮೇಲೆ ಓದಲಾದ ಕ್ರಮ ಸಂಖ್ಯೆ 6ರ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 214 ಬಿಆರ್‌ಎಸ್ 2015 ದಿನಾಂಕ 14.03.2016ರಲ್ಲಿ 2015–16ನೇ ಸಾಲಿಗೆ ಹೆಚ್ಚುವರಿಯಾಗಿ ಲೆಕ್ಕ ಶೀರ್ಷಿಕೆ "4801–01–190–0–09–211 Investment in Power Utilities (ಯೋಜನೆ)" ವಿದ್ಯುತ್ ಬಳಕೆಯಲ್ಲಿ ಬಂಡವಾಳ ಹೂಡಿಕೆಯಡಿ ಮಂಜೂರುಮಾಡಿ ಒದಗಿಸಿರುವ ₹..22.00 ಕೋಟಿಗಳ ಬಂಡವಾಳವನ್ನು ಕವಿಪ್ರನಿನಿಗೆ ಸಾಮಾನ್ಯ ಬಂಡವಾಳವಾಗಿ ಬಿಡುಗಡೆ ಮಾಡಲು ಪ್ರಸ್ತಾಪಿಸಿದ್ದು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ: 18.03.2016.**

1. 2015–16ನೇ ಸಾಲಿಗೆ ಹೆಚ್ಚುವರಿಯಾಗಿ ನಾಲ್ಕನೇ ತ್ರೈಮಾಸಿಕಕ್ಕೆ ವಿದ್ಯುತ್ ವಲಯದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗಾಗಿ ಲೆಕ್ಕ ಶೀರ್ಷಿಕೆ "4801–01–190–09–211 Investment in Power Utilities (ಯೋಜನೆ)" ವಿದ್ಯುತ್ ಬಳಕೆಯಲ್ಲಿ ಬಂಡವಾಳ ಹೂಡಿಕೆಯಡಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಯೋಜನೆಗೆ ಬಂಡವಾಳವಾಗಿ ₹.22.00 (ಇಪ್ಪತ್ತೆರಡು ಕೋಟಿಗಳು) ಕೋಟಿಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ₹.22.00 ಕೋಟಿಗಳನ್ನು ಬಂಡವಾಳವನ್ನಾಗಿ ಬಳಸಿಕೊಂಡು ಈ ಬಗ್ಗೆ ದೃಢೀಕರಣ Utilisation Certificate) ಹಾಗೂ ಅನುಸರಣ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.
3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪಕಾರ್ಯದರ್ಶಿ, ಇಂಧನ ಇಲಾಖೆರವರ ಮೇಲುರುಜುವನ್ನು ಹಣ ಸ್ವೀಕೃತಿ ರಸೀದಿ (Payees receipt) ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
4. ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಯನ್ನು ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5. ಮಹಾಲೇಖಪಾಲರವರಿಂದ ಪಡೆದುಕೊಳ್ಳಬೇಕಾಗಿರುವ ಅನುಮೋದನೆಗೆ ವಿನಾಯಿತಿಯನ್ನು ಇಂಧನ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಇಎನ್ 16 ಪಿಎಸ್‌ಆರ್ 2015/ಪಿ1 ದಿನಾಂಕ: 25.01.2016ರಲ್ಲಿ ನೀಡಿದೆ.
6. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 214 ಬಿಆರ್‌ಎಸ್ 2015, ಬೆಂಗಳೂರು, ದಿನಾಂಕ: 14.03.2016ರ ಆದೇಶದನ್ವಯ ಹೊರಡಿಸಿದೆ.
7. ಆರ್ಥಿಕ ಇಲಾಖೆಯ ದಿನಾಂಕ: 14.03.2016ರ ಆದೇಶವನ್ನು ಈ ಆದೇಶಕ್ಕೆ ಅನುಬಂಧವಾಗಿ ಲಗತ್ತಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

P.R.443

## ಇಂಧನ ಸಚಿವಾಲಯ

**ವಿಷಯ :** 2007–08 ರಿಂದ 2014–15ರವರೆಗೆ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜುವಿನ ಬಾಕಿ ಸಹಾಯಧನವನ್ನು 2015–16ನೇ ಸಾಲಿನಲ್ಲಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004 ದಿನಾಂಕ 15.03.2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ 04.09.2008.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2013 ದಿನಾಂಕ 17.05.2013.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015 ದಿನಾಂಕ: 29.04.2015, 18.05.2015, 01.06.2015 (TA), 04.06.2015 01.7.2015, 03.08.2015, 01.09.2015, 15.10.2015, 03.12.2015, 05.12.2015, 10.12.2015(TA), 23.01.2016, 04.02.2016 ಮತ್ತು 01.03.2016.
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್2015/ಪಿ4 ದಿನಾಂಕ: 22.06.2015(TA), 21.07.2015(TA), 25.08.2015(TA), 28.09.2015(TA), ಮತ್ತು 28.10.2015(TA),
6. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2015 ದಿನಾಂಕ 22.06.2015.
7. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015/ಪಿ2 ದಿನಾಂಕ: 04.01.2016(TA), 22.01.2016(TA), 02.03.2016, 08.03.2016 ಮತ್ತು 17.03.2016(TA),

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್ ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ (ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು) ಮುಂದಿನ ಆದೇಶದವರೆಗೆ ದಿನಾಂಕ : 01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.
3. ಮೇಲಿನ ಕ್ರಮಾಂಕ–3ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ದಿನಾಂಕ 13.05.2013ಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳ ದಂಡ ಸಹಿತ ವಿದ್ಯುತ್ ಬಾಕಿ ಶುಲ್ಕ ₹.319.61 ಕೋಟಿಗಳನ್ನು ಮನ್ನಾ ಮಾಡಲಾಗಿದೆ. ಇದರಲ್ಲಿ 2014–15ನೇ ಸಾಲಿನಲ್ಲಿ ₹.213.07 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. 2015–16ನೇ ಸಾಲಿಗೆ ಆಯವ್ಯಯದಲ್ಲಿ ಒದಗಿಸಿರುವ ₹.106.54 ಕೋಟಿಗಳಲ್ಲಿ ಮೇಲೆ ಕ್ರಮಾಂಕ–(4)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ₹.106.54 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.
4. ಆಯೋಗದ ದರ ಆದೇಶ 2013ರಲ್ಲಿ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ₹.443.49 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ₹.100.46 ಕೋಟಿಗಳನ್ನು ಬಿಡುಗಡೆ ಮಾಡಿದೆ. 2014–15ನೇ ಸಾಲಿನ ಬಾಕಿ ಸಹಾಯಧನ ₹.408.56 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ₹.91.61 ಕೋಟಿಗಳನ್ನು ಬಿಡುಗಡೆ ಮಾಡಿದೆ.
5. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2015–16ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ–7ರ ಪುಟ ಸಂಖ್ಯೆ–78ರಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ₹.7,498.00 ಕೋಟಿಗಳನ್ನು ಒದಗಿಸಲಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4), (5), (6) ಮತ್ತು (7) ರಲ್ಲಿನ ಸರ್ಕಾರಿ ಆದೇಶಗಳಲ್ಲಿ ಒಟ್ಟು ₹.6,689.49 ಕೋಟಿಗಳನ್ನು ಬಿಡುಗಡೆ ಮಾಡಿದೆ. ವಿವರ ಈ ಕೆಳಕಂಡಂತಿದೆ.

**₹. ಕೋಟಿಗಳಲ್ಲಿ**

| | |
|---|---|
| 2015–16ನೇ ಸಾಲಿನ ಆಯೋಗ ಅನುಮೋದಿಸಿರುವ ₹.7,197.16 ಕೋಟಿಗಳಲ್ಲಿ ನಗದು ರೂಪವಾಗಿ ನೀರಾವರಿ ಪಂಪುಸೆಟ್ಟು, ಭಾಗ್ಯಜ್ಯೋತಿ/ ಕುಟೀರಜ್ಯೋತಿ ಸ್ಥಾವರಗಳ ಉಚಿತ ವಿದ್ಯುತ್ ಸರಬರಾಜಿಗಾಗಿ ಸಹಾಯಧನ ಬಾಬ್ತು. | 5,396.00 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು. | 100.46 |
| 2014–15ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು. | 91.61 |
| ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು. | 106.54 |
| ತ್ರಿಪಕ್ಷೀಯ ಹೊಂದಾಣಿಕೆ ಏಪ್ರಿಲ್ 2015 ರಿಂದ ಫೆಬ್ರವರಿ 2016ರ ಮಾಹೆಯವರೆಗೆ ವಿದ್ಯುತ್ ತೆರಿಗೆ ವಸೂಲಿ ಮತ್ತುರಾಜಧನ ಬಾಬ್ತು. | 992.88 |

| | |
|---|---|
| ಸಹಾಯ ಧನದ ರೂಪದಲ್ಲಿ ಶ್ರೀ ಸತ್ಯ ಸಾಯಿ ಆಸ್ಪತ್ರೆಯ ವಿದ್ಯುತ್ ಬಿಲ್ಲಿನ ಬಾಬ್ತನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ. | 2.00 |
| **17.03.2016ರವರೆಗೆ ಬಿಡುಗಡೆ ಮಾಡಿರುವ ಒಟ್ಟು ಮೊತ್ತ.** | **6,689.49** |

6. 2015–16ನೇ ಸಾಲಿಗೆ ಸರ್ಕಾರ ಆಯವ್ಯಯದಲ್ಲಿ ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್ ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಒದಗಿಸಿರುವ ₹.7,498.00 ಕೋಟಿಗಳಲ್ಲಿ ₹.6,689.49 ಕೋಟಿಗಳನ್ನು ಈಗಾಗಲೇ ಬಿಡುಗಡೆ ಮಾಡಿದ್ದು, ₹.808.51 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 276 ಬಿಆರ್‌ಎಸ್ 2015 ದಿನಾಂಕ 24.03.2016ರಲ್ಲಿ ₹. 645.29 ಕೋಟಿಗಳ ಹೆಚ್ಚುವರಿ ಬಾಕಿ ಸಹಾಯಧನ ಹಂಚಿಕೆ ಮಾಡಿ ಆದೇಶ ಹೊರಡಿಸಿದೆ. ಒಟ್ಟಾರೆಯಾಗಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ₹.1,453.80 ಕೋಟಿಗಳನ್ನು ಬಿಡುಗಡೆ ಮಾಡಬಹುದಾಗಿದೆ. ಆರ್ಥಿಕ ಇಲಾಖೆ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 66 ವೆಚ್ಚ–1/2016 ದಿನಾಂಕ 24.03.2016 ರಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ₹.1,345.29 ಕೋಟಿಗಳನ್ನು ಸರ್ಕಾರ 2007–08 ರಿಂದ 2014–15ರ ವರೆಗೆ ಬಿಡುಗಡೆ ಮಾಡಬೇಕಾಗಿರುವ ಸಹಾಯಧನದ ಬಾಕಿ ಮೊತ್ತಕ್ಕೆ ಪರಿಗಣಿಸಿ ವಿಸಕಂಗಳಿಗೆ ಬಿಡುಗಡೆ ಮಾಡಲು ಸಹಮತಿಸಿದೆ.

7. ವಿಸಕಂಗಳಿಗೆ ₹.1,345.29 ಕೋಟಿಗಳನ್ನು ಸರ್ಕಾರ 2007–08 ರಿಂದ 2014–15 ರವರೆಗಿನ ಸಹಾಯಧನದ ಬಾಕಿ ಮೊತ್ತಕ್ಕೆ ಬಿಡುಗಡೆ ಮಾಡಲು ಪ್ರಸ್ತಾಪಿಸಿದ್ದು, ಅದರಂತೆ ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 6 ಪಿಎಸ್‌ಆರ್ 2015 ಬೆಂಗಳೂರು, ದಿನಾಂಕ 26.03.2016.**

1. ಸರ್ಕಾರವು ಭಾಗ್ಯಜ್ಯೋತಿ / ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಬಾಬ್ತು ವಿಸಕಂಗಳಿಗೆ ₹.1.345.29 ಕೋಟಿಗಳನ್ನು 2007–08 ರಿಂದ 2014–15ರವರೆಗಿನ ಸಹಾಯಧನದ ಬಾಕಿಗೆ ಲೆಕ್ಕಶೀರ್ಷಿಕೆ "2801–80–101–1–04–106" (ಸಹಾಯಧನ) (ಯೋಜನೇತರ) ಅಡಿಯಲ್ಲಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

₹.ಕೋಟಿಗಳಲ್ಲಿ

| **ವಿದ್ಯುತ್ ಸರಬರಾಜು ಕಂಪನಿಗಳು** | **2007–08 ರಿಂದ 2014–15ನೇ ಸಾಲಿನ ವರೆಗಿನ ಸಹಾಯಧನದ ಬಾಕಿಗೆ ಪರಿಗಣಿಸಿ ಬಿಡುಗಡೆ** |
|---|---|
| ಬೆವಿಕಂ | 263.57 |
| ಮವಿಕಂ | 150.37 |
| ಗುವಿಕಂ | 519.19 |
| ಚಾವಿಸನಿನಿ | 410.74 |
| ಹುಗ್ರಾಸಸಂ | 1.42 |
| **ಒಟ್ಟು** | **1,345.29** |

2. ಮೇಲಿನ ಆದೇಶ ಭಾಗದ ಕಂಡಿಕೆ 1 ರಲ್ಲಿ ಬಿಡುಗಡೆ ಮಾಡಿರುವ ಬಾಕಿ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

**(₹.ಕೋಟಿಗಳಲ್ಲಿ)**

| **ವಿದ್ಯುತ್ ಸರಬರಾಜು ಕಂಪನಿಗಳು** | **ವಿಸಕಂಗಳ ಪರವಾಗಿ ಕವಿನಿನಿಗೆ ಬಿಡುಗಡೆ ಮಾಡಿರುವ ಮೊತ್ತ** | **ವಿಸಕಂಗಳಿಗೆ ನಗದು ಬಿಡುಗಡೆ** | **ಒಟ್ಟು ಬಿಡುಗಡೆ** |
|---|---|---|---|
| ಬೆವಿಕಂ | 331.63 | 137.36 | 468.99 |
| ಮವಿಕಂ | 115.37 | 0.00 | 115.37 |
| ಗುವಿಕಂ | 350.00 | 100.19 | 450.19 |
| ಚಾವಿಸನಿನಿ | 203.00 | 107.74 | 310.74 |
| **ಒಟ್ಟು** | **1,000.00** | **345.29** | **1,345.29** |

3. ಮೇಲಿನ ಆದೇಶ ಭಾಗದ ಕಂಡಿಕೆ 2ರಲ್ಲಿನ ಕೋಷ್ಟಕದಲ್ಲಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯಿಂದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ₹.331.63 ಕೋಟಿಗಳಲ್ಲಿ ₹.35.00 ಕೋಟಿಗಳು ಮಂಗಳೂರು ವಿದ್ಯುತ್ ಸರಬರಾಜು ಕಂಪನಿವತಿಯಿಂದ, ₹.69.00 ಕೋಟಿಗಳು ಕಲಬುರಗಿ ವಿದ್ಯುತ್ ಸರಬರಾಜು ಕಂಪನಿವತಿಯಿಂದ, ₹.100.00 ಕೋಟಿಗಳು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮದವತಿಯಿಂದ ಎನರ್ಜಿ ಬ್ಯಾಲೆನ್ಸಿಂಗ್ ಹೊಂದಾಣಿಕೆ (Energy Balancing Adjustment) ಮೊತ್ತಕ್ಕೆ ಸರಿಹೊಂದಿಸಿ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಪರವಾಗಿ ವಿದ್ಯುತ್ ಖರೀದಿ ಅಸಲು ಬಾಕಿಗೆ ಲೆಕ್ಕೀಕರಿಸಿ ಆದೇಶಿಸಿದೆ.

4. ಮೇಲಿನ ಆದೇಶ ಭಾಗದ ಕಂಡಿಕೆ 2ರಲ್ಲಿನ ಕೋಷ್ಟಕದಲ್ಲಿ ವಿಸಕಂಗಳ ಪರವಾಗಿ ಕವಿನಿನಿಗೆ ಬಿಡುಗಡೆ ಮಾಡಿರುವ ಮೊತ್ತವು 2015–16ರ ಸಾಲಿನಲ್ಲಿ ವಿಸಕಂಗಳು ಕವಿನಿನಿಗೆ ಪಾವತಿಸಬೇಕಾಗಿರುವ ವಿದ್ಯುತ್ ಖರೀದಿ ಮೊತ್ತಕ್ಕಿಂತ ಹೆಚ್ಚಾಗಿದ್ದಲ್ಲಿ ಸದರಿ ಕಂಪನಿಗಳ ಪರವಾಗಿ 2014–15 ಹಾಗೂ ಹಿಂದಿನ ವರ್ಷಗಳ ವಿದ್ಯುತ್ ಖರೀದಿ ಅಸಲು ಬಾಕಿಗೆ ಸರಿಹೊಂದಿಸಿ ಲೆಕ್ಕೀಕರಿಸುವುದು.

5. ಮೇಲಿನ ಆದೇಶ ಭಾಗದ ಕಂಡಿಕೆ 2ರಲ್ಲಿನ ಕೋಷ್ಟಕದಲ್ಲಿ ಬಿಡುಗಡೆ ಮಾಡಿರುವ ಬಾಕಿ ಸಹಾಯಧನವನ್ನು ವಿಸಕಂಗಳ ಪರವಾಗಿ ಕವಿನಿನಿಗೆ ₹.1.000.00 ಕೋಟಿಗಳನ್ನು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ₹.137.36 ಕೋಟಿಗಳನ್ನು, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿಗೆ ₹.100.19 ಕೋಟಿಗಳನ್ನು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಕ್ಕೆ ₹.107.74 ಕೋಟಿಗಳನ್ನು, ಬಿಡುಗಡೆಗೆ ಮಾಡಿ ಆದೇಶಿಸಿದೆ. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿರುವ ₹.137.36 ಕೋಟಿ ಬಾಕಿ ಸಹಾಯಧನದಲ್ಲಿ ₹.1.42 ಕೋಟಿಗಳನ್ನು ಹುಕ್ಕೇರಿ ಗ್ರಾಮೀಣ ಸಹಕಾರ ಸಂಘದ ಬಾಬ್ತು ಒಳಗೊಂಡಿದ್ದು, ಈ ₹.1.42 ಕೋಟಿಗಳನ್ನು ಹುಕ್ಕೇರಿ ಗ್ರಾಮೀಣ ಸಹಕಾರ ಸಂಘದ ಪರವಾಗಿ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ವಿತರಿಸುವುದು.

6. ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಬಾಕಿ ಸಹಾಯಧನವನ್ನು ವಿಸಕಂಗಳು 2007–08 ರಿಂದ 2014–15ರ ವರೆಗಿನ (2012–13ನೇ ಸಾಲಿನ ಬಾಕಿ ಸಹಾಯಧನವನ್ನು ಹೊರತುಪಡಿಸಿ) ಸಹಾಯಧನದ ಬಾಕಿಗೆ ಲೆಕ್ಕೀಕರಿಸುವುದು.

7. ಕರ್ನಾಟಕ ವಿದುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಕಲಬುರಗಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದವರು ಹಣ ಸ್ವೀಕೃತಿ ರಸೀದಿಯ ಮೇಲೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ವಿಸಕಂಗಳ ಪರವಾಗಿ ಕವಿನಿನಿಗೆ ಬಿಡುಗಡೆ ಮಾಡಿರುವ ಮೊತ್ತಕ್ಕೆ ವಿಸಕಂಗಳು ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilisation Certificate) ಸಲ್ಲಿಸತಕ್ಕದ್ದು.

8. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಬಾಕಿ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

9. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

10. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳನ್ನು, ವಿಸಕಂಗಳಿಗೆ ಬಿಡುಗಡೆ ಮಾಡಿರುವ ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ ಕುಟೀರ ಜ್ಯೋತಿ ಮನ್ನಾ ಮಾಡಿರುವ ಮೊತ್ತದ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

11. ಈ ಆದೇಶವನ್ನು ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 276 ಬಿಆರ್‌ಎಸ್ 2015 ದಿನಾಂಕ 24.03.2016 ಮತ್ತು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 66 ವೆಚ್ಚ–1/2016 ದಿನಾಂಕ 24.03.2016ರಲ್ಲಿ ನೀಡಿರುವ ಸಹಮತಿಯನ್ವಯ ಬಾಕಿ ಸಹಾಯಧನ ಬಿಡುಗಡೆ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R.444

**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಬಿ.ಶಿವಯ್ಯ, ಕೆ.ಎ.ಎಸ್. (ಹಿ.ಶ್ರೇ) ಅಧಿಕಾರಿ, ಜಂಟಿ ನಿರ್ದೇಶಕರು, ಕೃಷಿ ಇಲಾಖೆ, ಇವರಿಗೆ ತಹಶೀಲ್ದಾರ್ ಗ್ರೇಡ್ – 1 ವೃಂದದಲ್ಲಿ ಪೂರ್ವಾನ್ವಯ ಬಡ್ತಿ ನೀಡಿ ಅರ್ಹತಾ ದಿನಾಂಕವನ್ನು ನೀಡುವ ಬಗ್ಗೆ.

**ಓದಲಾಗಿದೆ :**
(1) ಅಧಿಸೂಚನೆ ಸಂಖ್ಯೆ: ಕಂಇ 37 ಎಎಸ್‌ಜಿ 1991, ದಿನಾಂಕ: 14.09.1993.
(2) ಅಧಿಸೂಚನೆ ಸಂಖ್ಯೆ: ಕಂಇ 296 ಎಎಸ್‌ಡಿ 2011, ದಿನಾಂಕ: 02.01.2015.
(3) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಪಿಎಸ್‌ಸಿ 230 ಸಿಎನ್‌ಎಸ್ 2015, ದಿನಾಂಕ: 22.01.2016.

**ಪ್ರಸ್ತಾವನೆ :**

ಶ್ರೀ ಬಿ.ಶಿವಯ್ಯ, ಕೆ.ಎ.ಎಸ್. (ಹಿ.ಶ್ರೇ) ಅಧಿಕಾರಿ ಇವರು ಸರ್ಕಾರಕ್ಕೆ ಸಲ್ಲಿಸಿದ ಮನವಿಯಲ್ಲಿ ಈ ಹಿಂದೆ ಅವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿಶೇಷ ನೇಮಕಾತಿ ನಿಯಮಗಳ ಮೂಲಕ ತಹಶೀಲ್ದಾರ್ ಗ್ರೇಡ್ – 2 ವೃಂದಕ್ಕೆ ನೇರ ನೇಮಕಾತಿ ಹೊಂದಿದ್ದು, ಈ ನೇಮಕಾತಿಯಲ್ಲಿ ಶ್ರೀ ಶ್ರೀರಂಗಯ್ಯ ಎಂ.ಕೆ. (ಎಸ್.ಸಿ) ಇವರು ಶ್ರೀ ಬಿ.ಶಿವಯ್ಯರವರಿಗಿಂತ ಜೇಷ್ಠತೆಯಲ್ಲಿ ಕಿರಿಯ ಅಧಿಕಾರಿಯಾಗಿದ್ದು, ಅವರಿಗೆ ತಹಶೀಲ್ದಾರ್ ಗ್ರೇಡ್ – 1

ವೃಂದಕ್ಕೆ ದಿನಾಂಕ: 29.05.1996ರಂದು ಬಡ್ತಿ ನೀಡಿದ್ದು, ಆ ದಿನಾಂಕದಿಂದಲೇ ಜಾರಿಗೆ ಬರುವಂತೆ ಪೂರ್ವಾನ್ವಯ ಬಡ್ತಿ ನೀಡಿ ಅರ್ಹತಾ ದಿನಾಂಕವನ್ನು ನಿಗಧಿಪಡಿಸುವಂತೆ ಕೋರಿರುತ್ತಾರೆ.

ಕರ್ನಾಟಕ ನಾಗರಿಕ ಸೇವಾ (ಪ.ಜಾ / ಪ.ಪಂ ಅಭ್ಯರ್ಥಿಗಳನ್ನು ವೃಂದ 'ಎ' ಮತ್ತು 'ಬಿ' ಗುಂಪಿನ ಹುದ್ದೆಗಳಿಗೆ ವಿಶೇಷ ನೇಮಕಾತಿ) ನಿಯಮಾವಳಿಗಳು, 1985ರನ್ವಯ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಈ ಕೆಳಕಂಡ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ, ಆಯ್ಕೆ ಪಟ್ಟಿಯನ್ವಯ ಕಂದಾಯ ಇಲಾಖೆಗೆ ನೇಮಕಾತಿ ಆದೇಶ ಹೊರಡಿಸಲು ಕಳುಹಿಸಿದ್ದು, ಅದರಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 37 ಎಎಸ್‌ಜಿ 1991, ದಿನಾಂಕ: 14.09.1993ರಲ್ಲಿ ನೇಮಕಾತಿ ಆದೇಶ ಹೊರಡಿಸಲಾಗಿದೆ. ತದನಂತರ ತಹಶೀಲ್ದಾರ್ ಗ್ರೇಡ್ – 2 ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ: ಕಂಇ 253 ಎಎಸ್‌ಡಿ 2008, ದಿನಾಂಕ: 31.05.2011ರಂದು ಪ್ರಕಟಿಸಲಾಗಿದ್ದು, ವಿಶೇಷ ನೇಮಕಾತಿಯಲ್ಲಿ ಆಯ್ಕೆಗೊಂಡ ಅಧಿಕಾರಿಗಳಿಗೆ ಕೆಳಕಂಡಂತೆ ಜೇಷ್ಠತೆಯನ್ನು ನೀಡಲಾಗಿದೆ :–

| Sl. No. in the feeder cadre (Seniority no. in the final gradation list of Tahsildar Grade – 2) | Mode of Recruitment | Name of Tahasildar | Date of Birth | Qualifying date for promotion |
|---|---|---|---|---|
| 1257 | DR Batch Special Recruitment of SC/ST | Palaiah.S (ST) | 01.07.1959 | 24.04.1995 |
| 1258 | | Shivaiah.B (ST) | 21.05.1960 | 24.04.1995 |
| 1259 | | Upendra Nayak.D (ST) | 26.12.1950 | 24.04.1995 |
| 1260 | | Shailaja.C.P. (ST) | 27.02.1961 | 24.04.1995 |
| 1261 | | Shrirangaiah.M.K (SC) | 01.06.1960 | 24.04.1995 |

ಶ್ರೀ ಬಿ.ಶಿವಯ್ಯ ಇವರು ಸರ್ಕಾರಕ್ಕೆ ಆಗ್ಗಿಂದಾಗೆ ಸಲ್ಲಿಸಿರುವ ಮನವಿ ಹಾಗೂ ದಾಖಲೆಗಳಂತೆ ಇವರು ಮೂಲತ: ಪರಿಶಿಷ್ಟ ಜಾತಿಗೆ (ಎಸ್.ಸಿ) ಸೇರಿದವರಾಗಿದ್ದು, ತಹಶೀಲ್ದಾರ್ ಗ್ರೇಡ್ – 2 ವೃಂದದ ಹುದ್ದೆಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಆಯ್ಕೆ ಪಟ್ಟಿಯನ್ನು ಕಂದಾಯ ಇಲಾಖೆಗೆ ಕಳುಹಿಸುವಾಗ ಅವರ ಆಯ್ಕೆ ಪ್ರವರ್ಗವನ್ನು "SC" ಎಂದು ತೋರಿಸುವ ಬದಲಾಗಿ "ST" ನಮೂದಾಗಿದ್ದು, ಇದರಿಂದಾಗಿ ಕಾಲಕಾಲಕ್ಕೆ ನೀಡಲಾದ ಬಡ್ತಿಗಳಲ್ಲಿ ಎಸ್.ಸಿ. ಕೋಟಾದಲ್ಲಿ ಬದಲಾಗಿ ಎಸ್.ಟಿ. ಕೋಟಾದಲ್ಲಿ ಪರಿಗಣಿಸಿ ಬಡ್ತಿಗಳನ್ನು ನೀಡಿದ್ದು, ಅದರಿಂದ ಅನ್ಯಾಯವಾಗಿರುವುದನ್ನು ಸರಿಪಡಿಸುವಂತೆ ಕೋರಿರುತ್ತಾರೆ.

ಶ್ರೀ ಬಿ.ಶಿವಯ್ಯ ಮತ್ತು ಶ್ರೀ ಎಂ.ಕೆ.ಶ್ರೀರಂಗಯ್ಯ ಇವರ ಸೇವಾ ವಿವರಗಳು ಕೆಳಕಂಡಂತಿದೆ.

| ತಹಶೀಲ್ದಾರ್ ಗ್ರೇಡ್ – 1 ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿನ ಜೇಷ್ಠತಾ ಕ್ರ.ಸಂ. | ಅಧಿಕಾರಿಯ ಹೆಸರು | ಹುಟ್ಟಿದ ದಿನಾಂಕ | ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ ವಾಸ್ತವಿಕ ಬಡ್ತಿ ನೀಡಿದ ದಿನಾಂಕ. | ತಹಶೀಲ್ದಾರ್ ಗ್ರೇಡ್ – 1 ವೃಂದದಲ್ಲಿ ನೀಡಿರುವ ಅರ್ಹತಾ ದಿನಾಂಕ. |
|---|---|---|---|---|
| 390 | ಶ್ರೀ ಎಂ.ಕೆ.ಶ್ರೀರಂಗಯ್ಯ (ಎಸ್.ಸಿ.) | 01.06.1960 | 29.05.1996 | 29.05.1996 |
| 396 | ಶ್ರೀ ಬಿ.ಶಿವಯ್ಯ (ಎಸ್.ಸಿ) | 21.05.1960 | 24.12.2007 | 04.01.2001 |

ಮೇಲಿನ ವಿವರಗಳ ಪ್ರಕಾರ, ಶ್ರೀ ಎಂ.ಕೆ.ಶ್ರೀರಂಗಯ್ಯ ಇವರು ತಹಶೀಲ್ದಾರ್ ಗ್ರೇಡ್ – 1 ವೃಂದದಲ್ಲಿ ಜೇಷ್ಠತೆಯಲ್ಲಿ ಹಿರಿಯ ಅಧಿಕಾರಿಯಾಗಿದ್ದು, ಇವರಿಗೆ ದಿನಾಂಕ: 29.05.1996ರಂದು ಅರ್ಹತಾ ದಿನಾಂಕವನ್ನು ನೀಡಲಾಗಿದೆ. ಶ್ರೀ ಬಿ.ಶಿವಯ್ಯ ಇವರಿಗೆ ದಿನಾಂಕ: 04.01.2001ಕ್ಕೆ ಅರ್ಹತಾ ದಿನಾಂಕವನ್ನು ನಿಗಧಿಪಡಿಸಲಾಗಿದೆ. ಶ್ರೀ ಬಿ.ಶಿವಯ್ಯ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಮನವಿಯಲ್ಲಿ ನೇಮಕಾತಿ ಆದೇಶದಲ್ಲಿ ST ಅಭ್ಯರ್ಥಿಯೆಂದು ನಮೂದಿಸಿರುವ ಕಾರಣದಿಂದಾಗಿ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ ವಿಳಂಬವಾಗಿ ಬಡ್ತಿ ನೀಡಲಾಗಿದೆ ಎಂಬ ನಿಲುವನ್ನು ಅವರು ಪ್ರತಿಪಾದಿಸಿರುತ್ತಾರೆ. ಇದೇ ವಿಷಯವನ್ನು ಸಮಗ್ರವಾಗಿ ಪರಿಶೀಲಿಸಿದಾಗ ಈ ಕೆಳಕಂಡ ವಾಸ್ತವಾಂಶಗಳು ಕಂಡು ಬರುತ್ತವೆ.

**" (1) ಈ ಹಿಂದೆ ಕರ್ನಾಟಕ ಸಿವಿಲ್ ಸೇವೆಗಳು (ಕೆಲವೊಂದು ಗುಂಪು–ಎ ಮತ್ತು ಗುಂಪು–ಬಿ ಹುದ್ದೆಗಳಿಗೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ ವಿಶೇಷ ನೇಮಕಾತಿ) ನಿಯಮಗಳು, 1985ರನ್ವಯ ನೇಮಕಾತಿ ಮಾಡಿದ ಸಂದರ್ಭದಲ್ಲಿ, ಮೈಸೂರು ವಿಶ್ವವಿದ್ಯಾಲಯದಿಂದ ಬಂದಿದ್ದ ಅಭ್ಯರ್ಥಿಗಳ ಪಟ್ಟಿಯಲ್ಲಿ ಶ್ರೀ ಬಿ.ಶಿವಯ್ಯ ಇವರು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಯೆಂದು ನಮೂದಿಸಲಾಗಿದ್ದು, ಅದರಂತೆ ತಹಶೀಲ್ದಾರ್ ಗ್ರೇಡ್ – 2 ಹುದ್ದೆಗೆ ಆಯ್ಕೆ ಮಾಡಿದೆ. ಆದರೆ ನೇಮಕಾತಿ ಆದೇಶ ನೀಡುವ ಪೂರ್ವದಲ್ಲಿ ಈ ಅಭ್ಯರ್ಥಿಯ ಜಾತಿ ಕುರಿತು ಸಿಂಧುತ್ವ ಪ್ರಮಾಣ ಪತ್ರ ಪಡೆದಿದ್ದು, ಅದರನ್ವಯ ಅವರು ಪರಿಶಿಷ್ಟ ಜಾತಿಗೆ ಸೇರಿರುವುದು ಧೃಢಪಟ್ಟಿದೆ. ಆದರೆ ಅವರು ನಿರ್ದಿಷ್ಟವಾಗಿ ಯಾವ ಪ್ರವರ್ಗದಲ್ಲಿ ಆಯ್ಕೆಯಾಗಿದ್ದಾರೆ ಎಂಬುದನ್ನು ಖಚಿತಪಡಿಸಿಕೊಳ್ಳದೆ ಪರಿಶಿಷ್ಟ ಪಂಗಡದಡಿ ನೇಮಕಾತಿ ಆದೇಶ ನೀಡಿರುವುದು ಲೋಪವಾಗಿದೆ. ಇದರಿಂದಾಗಿ ಪರಿಶಿಷ್ಟ ಜಾತಿಗೆ ಸೇರಿದ ಶ್ರೀ ಬಿ.ಶಿವಯ್ಯ ಇವರು ಪರಿಶಿಷ್ಟ ಪಂಗಡಕ್ಕೆ ಮೀಸಲಾದ ಹುದ್ದೆಗೆ ನೇಮಕಗೊಂಡಿರುವುದು ನಿಯಮಬಾಹಿರವಾಗಿದೆ.**

**(2) ಇದೇ ಸಂದರ್ಭದಲ್ಲಿ ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರೆಂದು ಹೇಳಲಾಗಿರುವ ಶ್ರೀ ಎಂ.ಕೆ.ಶ್ರೀರಂಗಯ್ಯ ಇವರ ಪ್ರಕರಣವನ್ನು ಸಹ ಪರಿಶೀಲಿಸಲಾಗಿದ್ದು, ಬೆಂಗಳೂರು ವಿಶ್ವವಿದ್ಯಾಲಯದಿಂದ ಸ್ವೀಕರಿಸಲಾಗಿದ್ದ ಅಭ್ಯರ್ಥಿಗಳ ಪಟ್ಟಿಯಲ್ಲಿ ಇವರು ಪರಿಶಿಷ್ಟ ಜಾತಿಗೆ ಸೇರಿದವರೆಂದು ನಮೂದಾಗಿರುತ್ತದೆ. ಆಯ್ಕೆ ಮಂಡಳಿಯು ಇವರನ್ನು ಪರಿಶಿಷ್ಟ ಜಾತಿಯ ಮೀಸಲಾತಿಯಡಿಯಲ್ಲಿ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯಲ್ಲಿನ ಸಹಾಯಕ ನಿರ್ದೇಶಕರ ಹುದ್ದೆಗೆ ಆಯ್ಕೆ ಮಾಡಿದ್ದು, ಇದು ಕ್ರಮಬದ್ಧವಾಗಿದೆ. ಆದರೆ, ಇದಾದ ನಂತರ ಪರಿಶಿಷ್ಟ ಪಂಗಡದ ಮೀಸಲಾತಿಯಡಿ ತಹಶೀಲ್ದಾರ್ ಗ್ರೇಡ್ – 2 ಹುದ್ದೆಗೆ ನೇಮಕಗೊಂಡಿದ್ದ ಶ್ರೀ ಬಿ.ರಾಮು ಇವರು ಹುದ್ದೆಗೆ ಹಾಜರಾಗದಿದ್ದ ಸ್ಥಾನದಲ್ಲಿ ಹುದ್ದೆ ಬದಲಾವಣೆ ಮಾಡಿ ನೇಮಕ ಮಾಡುವಂತೆ ಸಲ್ಲಿಸಿದ ಮನವಿಯನ್ನು ಪರಿಗಣಿಸಿ ಇವರನ್ನು ತಹಶೀಲ್ದಾರ್ ಗ್ರೇಡ್ – 2 ಹುದ್ದೆಗೆ ನೇಮಕ ಮಾಡಲಾಗಿದೆ. ಆದರೆ ತಹಶೀಲ್ದಾರ್ ಗ್ರೇಡ್ – 2 ವೃಂದದಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಕೊರತೆ ರಿಕ್ತ ಸ್ಥಾನಗಳು ಇರಲಿಲ್ಲ. ತಹಶೀಲ್ದಾರ್ ಗ್ರೇಡ್ – 2 ಹುದ್ದೆಗೆ ಹಾಜರಾಗದ ಶ್ರೀ ರಾಮುರವರು ಪರಿಶಿಷ್ಟ ಪಂಗಡದ ಅಭ್ಯರ್ಥಿಯಾಗಿದ್ದು, ಇವರ ಸ್ಥಾನದಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಶ್ರೀ ಎಂ.ಕೆ.ಶ್ರೀರಂಗಯ್ಯ ಇವರನ್ನು ನೇಮಕ ಮಾಡಿರುವುದು ನಿಯಮಬಾಹಿರವಾಗಿರುತ್ತದೆ.**

**(3) ಈ ನೇಮಕಾತಿ ಪ್ರಕ್ರಿಯೆ ನಡೆದು ಸುಮಾರು 22 ವರ್ಷಗಳು ಮುಗಿದ ನಂತರ ಈಗ ಶ್ರೀ ಬಿ.ಶಿವಯ್ಯ ಇವರು ಪರಿಶಿಷ್ಠ ಜಾತಿಗೆ ಸೇರಿದವರೆಂದು ಪರಿಗಣಿಸಿದ್ದಲ್ಲಿ ತಹಶೀಲ್ದಾರ್ ಗ್ರೇಡ್ – 2 ವೃಂದಕ್ಕೆ ಆಯ್ಕೆಯಾಗುತ್ತಿದ್ದರೆ ? ಎಂಬ ಅಂಶವನ್ನು ಪ್ರಸ್ತಾಪಿಸಿರುವುದು ಸರಿಯಲ್ಲ. ಈ ಅಂಶವು ಆಗ ಲಭ್ಯವಿದ್ದ ಇತರೆ ವೃಂದಗಳಿಗೆ ಸೇರಿದ ಕೊರತೆ ರಿಕ್ತ ಸ್ಥಾನಗಳು ಹಾಗೂ ಅಭ್ಯರ್ಥಿಗಳ ಮೆರಿಟ್ ಅನ್ನು ಆಧರಿಸಬೇಕಾಗುತ್ತದೆ. ಇಷ್ಟು ದೀರ್ಘಾವಧಿಯ ನಂತರ ಹಾಗೂ ಈ ಅಧಿಕಾರಿ ತಹಶೀಲ್ದಾರ್ ಹಾಗೂ ನಂತರದ ಬಡ್ತಿ ಹುದ್ದೆಗಳಲ್ಲಿ 22 ವರ್ಷಗಳನ್ನು ಪೂರೈಸಿದ ನಂತರ ಪ್ರಸ್ತಾಪಿಸಿರುವುದನ್ನು ಪರಿಶೀಲಿಸುವುದು ಕಷ್ಟ ಸಾಧ್ಯ.**

**(4) ಶ್ರೀ ಬಿ.ಶಿವಯ್ಯ ಇವರ ಜಾತಿಯನ್ನು ಅವರು ಸಲ್ಲಿಸಿದ ಮನವಿ ಮತ್ತು ಇತರೆ ದಾಖಲೆಗಳ ಆಧಾರದ ಮೇಲೆ ಅವರು ಪರಿಶಿಷ್ಟ ಜಾತಿಗೆ ಸೇರಿದವರೆಂದು ಈಗಾಗಲೇ ನಿರ್ಧರಿಸಿ ಅದರಂತೆ ತಹಶೀಲ್ದಾರ್ ಗ್ರೇಡ್ – 1 ವೃಂದದ ಜೇಷ್ಠತಾ ಪಟ್ಟಿಯಲ್ಲಿ ಜೇಷ್ಟತಾ ಸ್ಥಾನವನ್ನು ನಮೂದಿಸಲಾಗಿದೆ.**

**(5) ಆದುದರಿಂದ, ಶ್ರೀ ಬಿ.ಶಿವಯ್ಯ ಇವರಿಗೆ ಜೇಷ್ಠತೆಯಲ್ಲಿ ಅವರಿಗಿಂತ ಕಿರಿಯರಿಗೆ ಬಡ್ತಿ ನೀಡಿದ ದಿನಾಂಕದಿಂದ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ ಪೂರ್ವಾನ್ವಯ ಬಡ್ತಿ ನೀಡಿ ಅವರುಗಳ ಅಂತರ್ ಜೇಷ್ಠತೆ (Inter-se) ನಿಗಧಿಪಡಿಸಬೇಕಾಗುತ್ತದೆ".**

ಇದಲ್ಲದೆ ಮುಂದುವರೆದು, ಪ್ರಕರಣವನ್ನು ಪರಿಶೀಲಿಸಿದಾಗ, ಶ್ರೀ ಬಿ.ಶಿವಯ್ಯ, ಇವರ ಜಾತಿಯನ್ನು ST ಎಂದು ನಮೂದಿಸಿದ ಕಾರಣದಿಂದಾಗಿ ST ಮೀಸಲಾತಿಯಡಿಯಲ್ಲಿ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ ಬಡ್ತಿಯನ್ನು ಪರಿಗಣಿಸುವಾಗ, ವಿಳಂಬವಾಗಿದೆ ಎಂಬುದು ಕಾರಣವಾಗಿರುವುದಿಲ್ಲ. ಶ್ರೀ ಬಿ.ಶಿವಯ್ಯ, ಇವರು ಶ್ರೀ ಶ್ರೀರಂಗಯ್ಯ.ಎಂ.ಕೆ. ಇವರಿಗಿಂತ ತಹಶೀಲ್ದಾರ್ ಗ್ರೇಡ್ – 1 ವೃಂದದಲ್ಲಿ ಜೇಷ್ಠತೆಯಲ್ಲಿ ಕಿರಿಯ ಅಧಿಕಾರಿಯಾಗಲು ಕೆಳಕಂಡ ಅಂಶಗಳು ಸಹ ಕಾರಣವಾಗಿರುವುದು ಸಹ ಕಂಡು ಬರುತ್ತದೆ.

- ಶ್ರೀ ಬಿ.ಶಿವಯ್ಯ ಮತ್ತು ಶ್ರೀ ಎಂ.ಕೆ.ಶ್ರೀರಂಗಯ್ಯ, ಇವರಿಬ್ಬರು ನೇರ ನೇಮಕಾತಿಯಲ್ಲಿ ವಿಶೇಷ ನೇಮಕಾತಿಯಡಿಯಲ್ಲಿ ತಹಶೀಲ್ದಾರ್ ಗ್ರೇಡ್ – 2 ವೃಂದಕ್ಕೆ ನೇಮಕಾತಿ ಹೊಂದಿರುತ್ತಾರೆ.
- ನೇಮಕಾತಿಯ ಆಯ್ಕೆ ಪಟ್ಟಿಯಲ್ಲಿ ಶ್ರೀ ಬಿ.ಶಿವಯ್ಯ, ಇವರು ST ಜಾತಿಗೆ ಹಾಗೂ ಶ್ರೀ ಎಂ. ಕೆ. ಶ್ರೀರಂಗಯ್ಯ ಇವರು SC ಜಾತಿಗೆ ಸೇರಿದವರಾಗಿದ್ದರೆಂದು ನಮೂದಾಗಿರುತ್ತದೆ.
- ತಹಶೀಲ್ದಾರ್ ಗ್ರೇಡ್ – 2 ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಅಧಿಸೂಚನೆ ಸಂ: ಕಂಇ 253 ಎಎಸ್‌ಡಿ 2008, ದಿನಾಂಕ: 31.05.2011ರಂದು ಪ್ರಕಟಿಸಲಾಗಿದ್ದು, ಈ ಜೇಷ್ಠತಾ ಪಟ್ಟಿಯಂತೆ **ಶ್ರೀ ಬಿ.ಶಿವಯ್ಯ (ಎಸ್.ಟಿ) ಇವರು ಹಿರಿಯ ಅಧಿಕಾರಿಯಾಗಿರುತ್ತಾರೆ.**
- ಇಲಾಖಾ ವಿಚಾರಣೆ ಬಾಕಿ ಇದ್ದು, ಒಂದು ಪ್ರಕರಣದಲ್ಲಿ ಕಾರಣ ಕೇಳುವ ನೋಟೀಸ್ ಸಂ: ಕಂಇ 10 ಮುನೋಸೆ (1) 1996 (ಭಾಗ), ದಿನಾಂಕ: 09.01.1998ರಲ್ಲಿ ಆರೋಪಣಾ ಪಟ್ಟಿಯನ್ನು ಜಾರಿ ಮಾಡಲಾಗಿತ್ತು. ಹಾಗೂ ಇನ್ನೊಂದು ಪ್ರಕರಣದಲ್ಲಿ ಆರೋಪಣಾ ಪಟ್ಟಿಯನ್ನು ಕಾರಣ ಕೇಳುವ ನೋಟೀಸ್ ಸಂ: ಕಂಇ 60 ಮುನೋಸೆ (2) 1996, ದಿನಾಂಕ: 23.02.1999ರಲ್ಲಿ ಜಾರಿ ಮಾಡಲಾಗಿತ್ತು. ಪ್ರೊಬೇಷನರಿ ಅವಧಿಯಲ್ಲಿ ವಿಚಾರಣೆ ಪ್ರಾರಂಭವಾಗಿದ್ದರಿಂದ, ಪ್ರೊಬೇಷನರಿ ಅವಧಿಯನ್ನು ತೃಪ್ತಿಕರವೆಂದು ಸರ್ಕಾರವು ಘೋಷಿಸಿದ್ದಿರಲಿಲ್ಲ.
- ಶ್ರೀ ಬಿ.ಶಿವಯ್ಯ, ಇವರ ವಿರುದ್ದ ಇಲಾಖಾ ವಿಚಾರಣೆ ಬಾಕಿ ಇದ್ದುದರಿಂದಲೂ ಹಾಗೂ ಪ್ರೊಬೇಷನರಿ ಅವಧಿ ತೃಪ್ತಿಕರವೆಂದು ಘೋಷಿಸಿದಿದ್ದರಿಂದ, ತಹಶೀಲ್ದಾರ್ ಗ್ರೇಡ್ – 2 ವೃಂದದಿಂದ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ ಬಡ್ತಿ ನೀಡುವ ಬಗ್ಗೆ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿ ಅವರ ಬಡ್ತಿ ಪ್ರಕರಣವು ಪರಿಗಣನೆಗೆ ಬಂದಿರುವುದಿಲ್ಲ. ಬಹುಶ: ಆ ಸಂದರ್ಭದಲ್ಲಿ ಅವರ ಮೇಲಿನ ಇಲಾಖಾ ವಿಚಾರಣೆಯು ಬಾಕಿ ಇದ್ದುದ್ದರಿಂದ, ಅವರ ಬಡ್ತಿ ಪ್ರಕರಣವನ್ನು ಮುಂದೂಡಿರುವುದು ಕಂಡು ಬರುತ್ತದೆ. ಈ ಹಿನ್ನೆಲೆಯಿಂದಾಗಿ ಶ್ರೀ ಬಿ.ಶಿವಯ್ಯ, ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯ ಅಧಿಕಾರಿಯಾದ ಶ್ರೀ ಎಂ.ಕೆ.ಶ್ರೀರಂಗಯ್ಯ ಮತ್ತು ಇತರರಿಗೆ ಅಧಿಸೂಚನೆ ಸಂ: ಕಂಇ 8 ಎಟಿಎಸ್ 1996, ದಿನಾಂಕ: 29.05.1996ರಲ್ಲಿ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ ಬಡ್ತಿ ನೀಡಲಾಗಿದೆ (ಕಡತ ಸಂ: ಕಂಇ 8 ಎಟಿಎಸ್ 1996 ಶಾಖೆಯಲ್ಲಿ ಲಭ್ಯವಿರುವುದಿಲ್ಲ). ಇದರಿಂದಾಗಿ, ಶ್ರೀ ಎಂ.ಕೆ.ಶ್ರೀರಂಗಯ್ಯ ಇವರ ಬಡ್ತಿಗೆ ಸಂಬಂಧಿಸಿದ ಇಲಾಖಾ ಮುಂಬಡ್ತಿ ಸಮಿತಿ ಸಭೆಯ ನಡವಳಿಯು ಲಭ್ಯವಿರುವುದಿಲ್ಲ. ಮುಂದುವರೆದು, ಶ್ರೀ ಬಿ.ಶಿವಯ್ಯ, ಇವರ ವಿರುದ್ದ ಇಲಾಖಾ ವಿಚಾರಣೆ ಬಾಕಿ ಇದ್ದ ಪ್ರಯುಕ್ತ ಹಾಗೂ ಪ್ರೊಬೇಷನರಿ ಅವಧಿ ತೃಪ್ತಿಕರವೆಂದು ಘೋಷಿಸದೆ ಇದ್ದ ಕಾರಣದಿಂದಾಗಿ ಇವರ ಬಡ್ತಿ ಮೌಲ್ಯಮಾಪನವನ್ನು ಮುಚ್ಚಿದ ಲಕೋಟೆಯಲ್ಲಿ ಇಡುವ ಪ್ರಶ್ನೆ ಉದ್ಭವಿಸುವುದಿಲ್ಲ.
- ಅಂತಿಮವಾಗಿ, ಶ್ರೀ ಬಿ.ಶಿವಯ್ಯ, ಇವರ ವಿರುದ್ಧ ಇದ್ದ ಎರಡು ಇಲಾಖಾ ವಿಚಾರಣೆ ಪ್ರಕರಣಗಳಲ್ಲಿ ಅವರನ್ನು ದೋಷಾರೋಪಣೆಯಿಂದ ಮುಕ್ತರನ್ನಾಗಿಸಿ ಸರ್ಕಾರಿ ಆದೇಶ ಸಂ: ಕಂಇ 10 ಮುನೋಸೆ (1) 1996, ದಿನಾಂಕ: 21.06.2001ರಲ್ಲಿಯೂ ಹಾಗೂ ಇನ್ನೊಂದು ಪ್ರಕರಣದಲ್ಲಿ ಸರ್ಕಾರದ ಆದೇಶ ಸಂ: ಕಂಇ 60 ಮುನೋಸೆ (2) 1996, ದಿನಾಂಕ: 29.06.2001ರಲ್ಲಿ ಆದೇಶ ಹೊರಡಿಸಲಾಗಿದೆ ಹಾಗೂ ಪ್ರೊಬೇಷನರಿ ಅವಧಿಯು ದಿನಾಂಕ: 19.09.1995ಕ್ಕೆ ಅಂತ್ಯಗೊಂಡಂತೆ ತೃಪ್ತಿಕರವಾಗಿ ಪೂರ್ಣಗೊಳಿಸಿದ್ದಾರೆಂದು ಸರ್ಕಾರದ ಆದೇಶ ಸಂಖ್ಯೆ: ಕಂಇ 311 ಎಎಸ್‌ಡಿ 2001, ದಿನಾಂಕ: 06.01.2003ರಂದು ಘೋಷಿಸಿ ಆದೇಶ ಹೊರಡಿಸಲಾಗಿದೆ.
- **ಅಧಿಸೂಚನೆ ಸಂ: ಕಂಇ 308 ಎಎಸ್‌ಡಿ 2007, ದಿನಾಂಕ: 24.12.2007ರಲ್ಲಿ ಶ್ರೀ ಬಿ.ಶಿವಯ್ಯ ಮತ್ತು 66 ತಹಶೀಲ್ದಾರ್ ಗ್ರೇಡ್ – 2 ಅಧಿಕಾರಿಗಳಿಗೆ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ ಸ್ಥಾನಪನ್ನ ಬಡ್ತಿ ನೀಡಲಾಗಿದೆ. ಈ ಬಡ್ತಿ ನೀಡಿದ ನಂತರ, ಶ್ರೀ ಬಿ.ಶಿವಯ್ಯ, ಇವರು, ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯ ಅಧಿಕಾರಿಯಾದ ಶ್ರೀ ಎಂ.ಕೆ.ಶ್ರೀರಂಗಯ್ಯ, ಇವರಿಗೆ ದಿನಾಂಕ: 29.05.1996ರಲ್ಲಿ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ ಬಡ್ತಿ ನೀಡಿರುವುದರಿಂದ, ಶ್ರೀ ಬಿ.ಶಿವಯ್ಯ, ಇವರಿಗೂ ಸಹ ದಿನಾಂಕ: 29.05.1996ರಿಂದಲೇ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ ಪೂರ್ವಾನ್ವಯವಾಗಿ ಬಡ್ತಿ ನೀಡದ ಕಾರಣದಿಂದಾಗಿ ಶ್ರೀ ಬಿ.ಶಿವಯ್ಯ ಇವರು ತಹಶೀಲ್ದಾರ್ ಗ್ರೇಡ್ – 1 ವೃಂದದಲ್ಲಿ ಶ್ರೀ ಎಂ.ಕೆ.ಶ್ರೀರಂಗಯ್ಯ ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾಗಿರುತ್ತಾರೆ.**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಬಿ.ಶಿವಯ್ಯ, ಕೆ.ಎ.ಎಸ್ (ಹಿ.ಶ್ರೇ) ಅಧಿಕಾರಿ, ಇವರಿಗೆ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ ಪೂರ್ವಾನ್ವಯವಾಗಿ ಬಡ್ತಿ ನೀಡಲು ಅರ್ಹತೆಯ ಬಗ್ಗೆ ದಿನಾಂಕ: 21.11.2015ರಂದು ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿ ಪರಿಶೀಲಿಸಲಾಗಿದ್ದು,

ಶ್ರೀ ಬಿ.ಶಿವಯ್ಯ, ಇವರು ತಹಶೀಲ್ದಾರ್ ಗ್ರೇಡ್ – 2 ವೃಂದದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಬಾಕಿಯಿದ್ದ ಎರಡು ಪ್ರತ್ಯೇಕ ಶಿಸ್ತು ಪ್ರಕರಣಗಳಲ್ಲಿ ದೋಷಮುಕ್ತರನ್ನಾಗಿಸಿ ಆದೇಶ ಹೊರಡಿಸಿರುವುದರಿಂದಲೂ, ಈ ಪ್ರಕರಣವನ್ನು ಹೊರತುಪಡಿಸಿ ಸದರಿಯವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇಲ್ಲದ ಕಾರಣದಿಂದಾಗಿಯೂ ಹಾಗೂ ಸದರಿಯವರಿಗೆ ಕಾಲಕಾಲಕ್ಕೆ ಮುಂದಿನ ವೃಂದಗಳಿಗೆ ಅಂದರೆ ತಹಶೀಲ್ದಾರ್ ಗ್ರೇಡ್ – 1, ಕೆ.ಎ.ಎಸ್ (ಕಿ.ಶ್ರೇ) ವೃಂದ ಹಾಗೂ ಕೆ.ಎ.ಎಸ್. (ಹಿ.ಶ್ರೇ) ವೃಂದಕ್ಕೆ ಬಡ್ತಿಯನ್ನು ನೀಡಿರುವುದರಿಂದಲೂ ಹಾಗೂ ಶ್ರೀ ಬಿ.ಶಿವಯ್ಯ, ಇವರ ವಾರ್ಷಿಕ ಕಾರ್ಯನಿರ್ವಹಣಾ ವರದಿಯ ಕಟ್ಟನ್ನು ಕೆ.ಎ.ಎಸ್. (ಕಿ.ಶ್ರೇ) ವೃಂದಕ್ಕೆ ಬಡ್ತಿ ನೀಡುವ ಸಂದರ್ಭದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಕಳುಹಿಸಲಾಗಿದ್ದು, ಸದರಿ ಅಧಿಕಾರಿಯವರಿಗೆ ತಹಶೀಲ್ದಾರ್ ಗ್ರೇಡ್ – 2 ವೃಂದದಿಂದ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ 2007ರಲ್ಲಿ ಬಡ್ತಿ ನೀಡುವಾಗ, ಅವರ ವಾರ್ಷಿಕ ಕಾರ್ಯನಿರ್ವಹಣಾ ವರದಿಯನ್ನು ಪರಿಶೀಲಿಸಿ ಯಾವುದೇ ಪ್ರತಿಕೂಲ ಷರಾಗಳು ಇಲ್ಲದಿರುವುದನ್ನು ಧೃಢಪಡಿಸಿಕೊಂಡು ಬಡ್ತಿ ನೀಡಿರುವಾಗ ಅದೇ ವರದಿಯನ್ನು ಮತ್ತು ಸಿಆಸು ಇಲಾಖೆಯಿಂದ ಪಡೆದುಕೊಂಡು ಪರಿಶೀಲಿಸುವ ಅಗತ್ಯತೆ ಇರುವುದಿಲ್ಲವೆಂದು ಇಲಾಖಾ ಮುಂಬಡ್ತಿ ಸಮಿತಿ ಸಭೆಯು ಮನಗಂಡು ಕೆಳಕಂಡಂತೆ ಶಿಫಾರಸ್ಸು ಮಾಡಿರುತ್ತದೆ :–

1. **ಶ್ರೀ ಬಿ.ಶಿವಯ್ಯ, ಕೆ.ಎ.ಎಸ್ (ಹಿ.ಶ್ರೇ) ಅಧಿಕಾರಿ, ಇವರಿಗೆ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ, ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಎಂ.ಕೆ.ಶ್ರೀರಂಗಯ್ಯ, ಇವರಿಗೆ ಅಧಿಸೂಚನೆ ಸಂ: ಕಂಇ 8 ಎಟಿಎಸ್ 1996, ದಿನಾಂಕ: 29.05.1996ರಲ್ಲಿ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ ಬಡ್ತಿ ನೀಡಲಾಗಿದ್ದು, ಶ್ರೀ ಬಿ.ಶಿವಯ್ಯ, ಇವರಿಗೂ ಸಹ ದಿನಾಂಕ: 29.05.1996ರಿಂದ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ ಪೂರ್ವಾನ್ವಯ ಬಡ್ತಿ ನೀಡಲು ;**
2. **ತಹಶೀಲ್ದಾರ್ ಗ್ರೇಡ್ – 1 ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಅಧಿಸೂಚನೆ ಸಂ: ಕಂಇ 296 ಎಎಸ್‌ಡಿ 2011, ದಿನಾಂಕ: 02.01.2015ರಂದು ಪ್ರಕಟಿಸಲಾಗಿದ್ದು, ಈ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಎಂ.ಕೆ.ಶ್ರೀರಂಗಯ್ಯ, ಇವರ ಜೇಷ್ಠತಾ ಕ್ರ.ಸಂ:390 ಆಗಿದ್ದು, ಅರ್ಹತಾ ದಿನಾಂಕ: 29.05.1996ಕ್ಕೆ ನಿಗಧಿಪಡಿಸಲಾಗಿದೆ. ಆದ್ದರಿಂದ, ಶ್ರೀ ಬಿ.ಶಿವಯ್ಯ, ಇವರಿಗೆ ಜೇಷ್ಠತೆಯನ್ನು 389 (ಎ)ಗೆ ನಿಗಧಿಪಡಿಸಲು ಹಾಗೂ ಅರ್ಹತಾ ದಿನಾಂಕ: 29.05.1996ಕ್ಕೆ ನಿಗಧಿಪಡಿಸಲು.**

ದಿನಾಂಕ: 21.11.2015ರಂದು ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯ ಶಿಫಾರಸ್ಸಿನಂತೆ ಶ್ರೀ ಬಿ.ಶಿವಯ್ಯ ಇವರಿಗಿಂತ ಕಿರಿಯ ಅಧಿಕಾರಿಯಾದ ಶ್ರೀ ಶ್ರೀರಂಗಯ್ಯ.ಎಂ.ಕೆ. ಇವರಿಗೆ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ ದಿನಾಂಕ: 29.05.1996ರಂದು ಬಡ್ತಿ ನೀಡಲಾಗಿದ್ದು, ಸದರಿ ದಿನಾಂಕದಿಂದ ಪೂರ್ವಾನ್ವಯ ಬಡ್ತಿ ನೀಡುವ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು. ಲೋಕಸೇವಾ ಆಯೋಗವು ಮೇಲೆ ಓದಲಾದ ಕ್ರಮಾಂಕ (3)ರ ದಿನಾಂಕ: 22.01.2016ರ ಪತ್ರದಲ್ಲಿ ಶ್ರೀ ಬಿ.ಶಿವಯ್ಯ ಇವರಿಗೆ ದಿನಾಂಕ: 29.05.1996ರಿಂದ ತಹಶೀಲ್ದಾರ್ ಗ್ರೇಡ್ – 1 ಹುದ್ದೆಗೆ ಪೂರ್ವಾನ್ವಯವಾಗಿ ಬಡ್ತಿ ನೀಡಲು ತನ್ನ ಸಹಮತಿ ನೀಡಿರುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 344 ಎಎಸ್‌ಡಿ 2010, ಬೆಂಗಳೂರು, ದಿನಾಂಕ: 05.02.2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಬಿ.ಶಿವಯ್ಯ, ಕೆ.ಎ.ಎಸ್ (ಹಿ.ಶ್ರೇ) ಅಧಿಕಾರಿ, ಇವರಿಗೆ ತಹಶೀಲ್ದಾರ್ ಗ್ರೇಡ್ – 1 ವೃಂದದಲ್ಲಿ ಕೆಳಕಂಡಂತೆ ಪೂರ್ವಾನ್ವಯ ಬಡ್ತಿ ನೀಡಿ, ತಹಶೀಲ್ದಾರ್ ಗ್ರೇಡ್ – 1 ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಜೇಷ್ಟತಾ ಕ್ರಮ ಸಂಖ್ಯೆ ಹಾಗೂ ಅರ್ಹತಾ ದಿನಾಂಕವನ್ನು ನಿಗಧಿಪಡಿಸಿ ಆದೇಶಿಸಿದೆ :–

1. **ಶ್ರೀ ಬಿ.ಶಿವಯ್ಯ, ಕೆ.ಎ.ಎಸ್ (ಹಿ.ಶ್ರೇ) ಅಧಿಕಾರಿ, (ತಹಶೀಲ್ದಾರ್ ಗ್ರೇಡ್ – 1 ವೃಂದದಲ್ಲಿ) ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಎಂ.ಕೆ.ಶ್ರೀರಂಗಯ್ಯ, ಇವರಿಗೆ ಅಧಿಸೂಚನೆ ಸಂ: ಕಂಇ 8 ಎಟಿಎಸ್ 1996, ದಿನಾಂಕ: 29.05.1996ರಲ್ಲಿ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ ಬಡ್ತಿ ನೀಡಲಾದಂತೆ, ಶ್ರೀ ಬಿ.ಶಿವಯ್ಯ, ಇವರಿಗೂ ಸಹ ದಿನಾಂಕ: 29.05.1996ರಿಂದ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್ – 1 ವೃಂದಕ್ಕೆ ಪೂರ್ವಾನ್ವಯ ಬಡ್ತಿ ನೀಡಿದೆ.**
2. **ತಹಶೀಲ್ದಾರ್ ಗ್ರೇಡ್ – 1 ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಅಧಿಸೂಚನೆ ಸಂ: ಕಂಇ 296 ಎಎಸ್‌ಡಿ 2011, ದಿನಾಂಕ: 02.01.2015ರಂದು ಪ್ರಕಟಿಸಲಾಗಿದ್ದು, ಈ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಎಂ.ಕೆ.ಶ್ರೀರಂಗಯ್ಯ, ಇವರ ಜೇಷ್ಠತಾ ಕ್ರ.ಸಂ:390 ಆಗಿದ್ದು, ಅರ್ಹತಾ ದಿನಾಂಕ: 29.05.1996 ಎಂದು ನಿಗಧಿಪಡಿಸಲಾಗಿದೆ. ಆದ್ದರಿಂದ, ಶ್ರೀ ಬಿ.ಶಿವಯ್ಯ, ಇವರಿಗೂ ಸಹ ಸದರಿ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಜೇಷ್ಠತಾ ಕ್ರಮ ಸಂಖ್ಯೆ: 389 (ಎ) ಹಾಗೂ ಅರ್ಹತಾ ದಿನಾಂಕ: 29.05.1996 ಎಂದು ನಿಗಧಿಪಡಿಸಿ ಆದೇಶಿಸಿದೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಾಲಕೃಷ್ಣಯ್ಯ**
ಸರ್ಕಾರದ ಉಪ ಕಾರ್ಯದರ್ಶಿ
(ಭೂಮಾಪನ, ಸೇ–1 ಮತ್ತು 3)
ಕಂದಾಯ ಇಲಾಖೆ

P.R. 563
SC – 200

## ಒಳಾಡಳಿತ ಸಚಿವಾಲಯ

**ವಿಷಯ :** ಬೆಂಗಳೂರು ಜಿಲ್ಲೆಯ ಉಪವಿಭಾಗವನ್ನು ಹೊಸಕೋಟೆ ಮತ್ತು ಆನೇಕಲ್ ಉಪವಿಭಾಗಗಳಾಗಿ ವಿಭಜಿಸುವ ಕುರಿತು ಆದೇಶ.

**ಓದಲಾಗಿದೆ :** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ: ಆರ್.ಎಲ್.ಎನ್(6) 18/2015–16, ದಿನಾಂಕ: 20–8–2015 ಮತ್ತು 29–02–2016

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುತ್ತಾ, ಬೆಂಗಳೂರು ಜಿಲ್ಲೆಯ ಬೆಂಗಳೂರು ಉಪವಿಭಾಗವು 932 ಚ.ಕಿ.ಮೀ ವ್ಯಾಪ್ತಿ ಹೊಂದಿದ್ದು, 5 ವೃತ್ತಗಳು 1 ಪಿ.ಐ ಠಾಣೆ ಮತ್ತು 12 ಪೊಲೀಸ್ ಠಾಣೆಗಳನ್ನು ಹೊಂದಿರುತ್ತದೆ. ಇದರ ಕೇಂದ್ರ ಸ್ಥಾನವು ಬೆಂಗಳೂರು ಜಿಲ್ಲಾ ಪೊಲೀಸ್ ಕಛೇರಿಯ ಆವರಣದಲ್ಲಿದ್ದು, ತುರ್ತು ಪರಿಸ್ಥಿತಿಯಲ್ಲಿ ಮತ್ತು ಅಪರಾಧ ಸ್ಥಳಗಳಿಗೆ ಭೇಟಿ ನೀಡಲು

ಅನಾನುಕೂಲವಾಗುತ್ತದೆ. ಆದ್ದರಿಂದ ಈಗಿರುವ ಬೆಂಗಳೂರು ಉಪವಿಭಾಗವನ್ನು ಡಿ.ಎಸ್.ಪಿ ಹುದ್ದೆಯೊಂದಿಗೆ ಹೊಸಕೋಟೆಗೆ ಸ್ಥಳಾಂತರಿಸಿ ಹೊಸದಾಗಿ ಆನೇಕಲ್ ಉಪವಿಭಾಗವನ್ನು 01 ಡಿ.ಎಸ್.ಪಿ, 2 ಎಫ್.ಡಿ.ಎ, 2 ಬೆರಳಚ್ಚುಗಾರರು, 2 ಹೆಚ್.ಸಿ, 8 ಪಿ.ಸಿ ಮತ್ತು 2 ಎ.ಪಿ.ಸಿ (ಚಾ) ಹುದ್ದೆಗಳೊಂದಿಗೆ ಸೃಜಿಸಲು ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 220 ಪಿಓಪಿ 2015, ಬೆಂಗಳೂರು, ದಿನಾಂಕ:05 ಆಗಸ್ಟ್ 2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ಜಿಲ್ಲೆಯ ಉಪವಿಭಾಗವನ್ನು ಹೊಸಕೋಟೆ ಮತ್ತು ಆನೇಕಲ್ ಉಪವಿಭಾಗಗಳಾಗಿ ವಿಭಜಿಸಿ ಸದರಿ ಪೊಲೀಸ್ ಉಪವಿಭಾಗಗಳಿಗೆ ಈ ಕೆಳಕಂಡಂತೆ ಹುದ್ದೆಗಳನ್ನು ಸೃಜಿಸಲು ಸರ್ಕಾರವು ಮಂಜೂರಾತಿ ನೀಡಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆ | ಹೊಸಕೋಟೆ ಉಪವಿಭಾಗ | ಆನೇಕಲ್ ಉಪವಿಭಾಗ | ಭರ್ತಿ ಮಾಡುವ ವಿಧಾನ |
|---|---|---|---|---|
| 1. | ಡಿ.ಎಸ್.ಪಿ | – | 01 | ಸಿ&ಆರ್ ನಿಯಮಗಳು |
| 2. | ಪ್ರ.ದ.ಸ | 01 | 01 | ಸಿ&ಆರ್ ನಿಯಮಗಳು |
| 3. | ಬೆರಳಚ್ಚುಗಾರರು | 01 | 01 | ಹೊರಗುತ್ತಿಗೆ |
| 4. | ಸಿ.ಪಿ.ಸಿ. | 02 | 02 | ಸಿ&ಆರ್ ನಿಯಮಗಳು |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 196 ವೆಚ್ಚ–11/2016, ದಿನಾಂಕ:29–07–2016ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

**PR. 589**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎನ್.ದೇವರಾಜ**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)

ಒಳಾಡಳಿತ ಇಲಾಖೆ, (ಪೊಲೀಸ್ ವೆಚ್ಚ)

## ಕಂದಾಯ ಸಚಿವಾಲಯ

**ವಿಷಯ:** ರಾಜ್ಯದಲ್ಲಿ ಅಡ್ಹೆಸಿವ್ ರೆವಿನ್ಯೂ ಸ್ಟಾಂಪ್‌ಗಳ ಬಳಕೆ ಪುನರ್ ಪ್ರಾರಂಭಿಸುವ ಬಗ್ಗೆ–ಆದೇಶ.

**ಪ್ರಸ್ತಾವನೆ :–**

ಕರ್ನಾಟಕ ರಾಜ್ಯದಲ್ಲಿ ದಿನಾಂಕ: 1–4–2003 ರಿಂದ ಜಾರಿಗೆ ಬಂದಿರುವಂತೆ ಛಾಪಾ ಕಾಗದಗಳ ಹಾಗೂ ಅಡ್ಹೆಸಿವ್ ಸ್ಟಾಂಪ್‌ಗಳ ಪೂರೈಕೆ ಹಾಗೂ ಬಳಕೆಯನ್ನು ಸ್ಥಗಿತಗೊಳಿಸಲಾಗಿರುತ್ತದೆ. ಈ ಸಂಬಂಧವಾಗಿ ಕರ್ನಾಟಕ ಮುದ್ರಾಂಕ ಕಾಯ್ದೆ 1957 ರ ಕಲಂ 2(1)(ಹೆಚ್), 2(1)(ಇ), 2(1)ಆರ್), 10(2)(ಬಿ), 11, 12, 60 ಹಾಗೂ 63 ಗಳಿಗೆ ಕಾಯ್ದೆ ಸಂಖ್ಯೆ: 1 ಆಫ್ 2008 ರನ್ವಯ ತಿದ್ದುಪಡಿ ತರಲಾಗಿರುತ್ತದೆ. ಕರ್ನಾಟಕ ರಾಜ್ಯದಲ್ಲಿ ರೆವಿನ್ಯೂ ಸ್ಟಾಂಪ್ ದೊರೆಯುತ್ತಿಲ್ಲವಾದ್ದರಿಂದ ಅವುಗಳನ್ನು ನೆರೆ ರಾಜ್ಯಗಳಿಂದ ತಂದು ಕರ್ನಾಟಕದಲ್ಲಿ ಹೆಚ್ಚಿನ ಬೆಲೆಗೆ ಮಾರಾಟ ಮಾಡುತ್ತಿರುವುದಾಗಿ ರಿಟ್ ಅರ್ಜಿ ಸಂಖ್ಯೆ: 30100/2014 (GM-PIL) ರಲ್ಲಿ ತಿಳಿಸಲಾಗಿರುತ್ತದೆ.

ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 30100/2014 (GM-PIL) ಗೆ ಸಂಬಂಧಿಸಿದಂತೆ ದಿನಾಂಕ: 01–12–2014 ರಂದು ನೀಡಿದ ಆದೇಶದಲ್ಲಿ ಕರ್ನಾಟಕ ಮುದ್ರಾಂಕ ಕಾಯ್ದೆ 1957ಕ್ಕೆ ಕಾಯ್ದೆ ಸಂಖ್ಯೆ: 1 ಆಫ್ 2008 ಪ್ರಕಾರ ತರಲಾದ ತಿದ್ದುಪಡಿಗಳು ಭಾರತೀಯ ಮುದ್ರಾಂಕ ಕಾಯ್ದೆ 1899ರ ಅನುಚ್ಛೇದ 53 ಹಾಗೂ ಕಲಂ 10 ಮತ್ತು 11 ಗಳಿಗೆ ಅನ್ವಯಿಸುವುದಿಲ್ಲವೆಂದು ಅಭಿಪ್ರಾಯ ಪಟ್ಟಿರುತ್ತದೆ. ಇದೇ ಅಭಿಪ್ರಾಯವನ್ನು ರಾಜ್ಯದ ಕಾನೂನು ಇಲಾಖೆಯೂ ಸಹ ವ್ಯಕ್ತ ಪಡಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಹಾಗೂ ಅಡ್ಹೆಸಿವ್ ರೆವಿನ್ಯೂ ಸ್ಟಾಂಪ್‌ಗಳನ್ನು ಬೇರೆ ರಾಜ್ಯದಿಂದ ತಂದು ರಾಜ್ಯದಲ್ಲಿ ಅಕ್ರಮವಾಗಿ ಮಾರಾಟ ಮಾಡುವುದನ್ನು ತಪ್ಪಿಸಲು ಹಾಗೂ ರಾಜ್ಯದ ಜನತೆಗೆ ಅಡ್ಹೆಸಿವ್ ರೆವಿನ್ಯೂ ಸ್ಟಾಂಪ್‌ಗಳನ್ನು ಸುಲಭದಲ್ಲಿ ದೊರೆಯುವಂತಾಗಲೆಂಬ ಉದ್ದೇಶದಿಂದ ಅಡ್ಹೆಸಿವ್ ರೆವಿನ್ಯೂ ಸ್ಟಾಂಪ್‌ಗಳನ್ನು ಕೇಂದ್ರ ಸರ್ಕಾರದ ಇಂಡಿಯನ್ ಸೆಕ್ಯೂರಿಟಿ ಪ್ರೆಸ್ ನಾಸಿಕ್ ದಿಂದ ಪಡೆದುಕೊಂಡು ಖಜಾನೆಯಲ್ಲಿ ದಾಸ್ತಾನು ಸಂಗ್ರಹಿಸಿ ಅಂಚೆ ಕಛೇರಿಗಳ ಮೂಲಕ ಸಾರ್ವಜನಿಕರಿಗೆ ಒದಗಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಕಂಇ 82 ಮುನೋಮು 2014, ಬೆಂಗಳೂರು, ದಿನಾಂಕ: 31–12–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಅಡ್ಹೆಸಿವ್ ರೆವಿನ್ಯೂ ಸ್ಟಾಂಪ್‌ಗಳ ಬಳಕೆಯನ್ನು ರಾಜ್ಯದಲ್ಲಿ ಪುನರ್ ಪ್ರಾರಂಭಿಸಲು ಆದೇಶಿಸಿದೆ.

ಆರ್ಥಿಕ ಇಲಾಖೆಯು, ರೆವಿನ್ಯೂ ಸ್ಟಾಂಪ್‌ಗಳ ಸಂಗ್ರಹಣೆ ಮತ್ತು ವಿತರಣೆಯನ್ನು ಈ ಹಿಂದೆ ನಿರ್ವಹಿಸುತ್ತಿದ್ದಂತೆ ಈಗಲೂ ಸಹ ರೆವಿನ್ಯೂ ಸ್ಟಾಂಪ್‌ಗಳನ್ನು ಇಂಡಿಯನ್ ಸೆಕ್ಯೂರಿಟಿ ಪ್ರೆಸ್, ನಾಸಿಕ್‌ದಿಂದ ಪಡೆದುಕೊಂಡು ಖಜಾನೆ ಇಲಾಖೆಯಲ್ಲಿ ದಾಸ್ತಾನು ಸಂಗ್ರಹಿಸಿ ಅವುಗಳನ್ನು ಅಂಚೆ ಕಛೇರಿಗಳ ಮೂಲಕ ಸಾರ್ವಜನಿಕರಿಗೆ ಒದಗಿಸಲು ಅಗತ್ಯ ಕ್ರಮ ಜರುಗಿಸುವುದು. ಇದಲ್ಲದೆ ರಾಜ್ಯದ ವಿವಿಧ ಖಜಾನೆಗಳಲ್ಲಿ ಲಭ್ಯವಿರುವ ರೆವಿನ್ಯೂ ಸ್ಟಾಂಪ್‌ಗಳ ದಾಸ್ತಾನನ್ನು ಅಂಚೆ ಕಛೇರಿಗಳ ಮೂಲಕ ಸಾರ್ವಜನಿಕ ವಿತರಣೆಗಾಗಿ ಬಿಡುಗಡೆಗೊಳಿಸಲು ಖಜಾನೆ ಇಲಾಖೆಯ ನಿರ್ದೇಶಕರು ಹಾಗೂ ಪೋಸ್ಟ್ ಮಾಸ್ಟರ್ ಜನರಲ್, ಕರ್ನಾಟಕ, ಬೆಂಗಳೂರು ಇವರಿಗೆ ಆರ್ಥಿಕ ಇಲಾಖೆಯು ಸೂಕ್ತ ನಿರ್ದೇಶನಗಳನ್ನು ನೀಡುವುದು.

**P.R.590**

**S.C. 100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ನಾರಾಯಣಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ & ಮುದ್ರಾಂಕ)

**ಒಳಾಡಳಿತ ಸಚಿವಾಲಯ**

**ವಿಷಯ :** ದಿನಾಂಕ : 28–04–2016 ರಂದು ಚಾಮರಾಜನಗರ ತಾಲ್ಲೂಕು, ಸಂತೇಮರಹಳ್ಳಿ ಹೋಬಳಿ, ಹೊಂಗನೂರು ಗ್ರಾಮದಲ್ಲಿ ನಡೆದಿರುವ ಗಲಭೆ/ಅಹಿತಕರ ಘಟನೆಯಲ್ಲಿ, ತೀವ್ರತರವಾಗಿ ಗಾಯಗೊಂಡ ಸಂತ್ರಸ್ಥರರಿಗೆ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ :**
1) ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ರವರ ಪತ್ರ ಸಂಖ್ಯೆ : ಎಂ.ಎ.ಜಿ(1)/ಎಂಎಲ್ಒ : 52 : 2016–17, ದಿನಾಂಕ : 25–05–2016.
2) ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ : 06 : ಸಿಆರ್‌ಆರ್ : 2014, ದಿನಾಂಕ : 18–08–2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆರವರ ದಿನಾಂಕ: 25–05–2016ರ ಪತ್ರದಲ್ಲಿ ದಿನಾಂಕ: 28–04–2016 ರಂದು ಚಾಮರಾಜನಗರ ತಾಲ್ಲೂಕು ಹೊಂಗನೂರು ಗ್ರಾಮದಲ್ಲಿ ಬೆಳಿಗ್ಗೆ 7.00 ಗಂಟೆಯ ಸಮಯದಲ್ಲಿ ಡಾ॥ ಬಿ.ಆರ್. ಅಂಬೇಡ್ಕರ್‌ರವರ ಕಟೌಟ್‌ಗೆ ಅಪಮಾನ ಮಾಡಿರುವ ಬಗ್ಗೆ ಎರಡು ಗುಂಪಿನ ನಡುವೆ ಗ್ರಾಮದಲ್ಲಿ ಗಲಭೆ ನಡೆದಿದ್ದು, ಸದರಿ ಗಲಭೆ/ಅಹಿತಕರ ಘಟನೆಯಲ್ಲಿ, ತೀವ್ರತರವಾಗಿ ಗಾಯಗೊಂಡ ಹೊಂಗನೂರು ಗ್ರಾಮ, ಚಾಮರಾಜನಗರ ತಾಲ್ಲೂಕಿನ ನಿವಾಸಿಗಳಾದ, ಶ್ರೀ ದಾಸನಾಯಕ ಬಿನ್ ಲೇಟ್ ಪುಟ್ಟರಂಗನಾಯಕ ಮತ್ತು ಶ್ರೀ ನಾಗೇಶ್ ನಾಯಕ ಬಿನ್ ನಾರಾಯಣ ನಾಯಕರವರುಗಳಿಗೆ ತಲಾ ₹. 50,000/– (ರೂಪಾಯಿ ಐವತ್ತು ಸಾವಿರಗಳು ಮಾತ್ರ) ಗಳಂತೆ ಒಟ್ಟು ₹. 1,00,000/– (ರೂಪಾಯಿ ಒಂದು ಲಕ್ಷ ಮಾತ್ರ) ಗಳ ಪರಿಹಾರವನ್ನು ಬಿಡುಗಡೆಗೊಳಿಸಲು ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆರವರು ಪರಿಹಾರ ಧನವನ್ನು ಮಂಜೂರು ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ರವರ ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ದಿನಾಂಕ : 28–04–2016 ರಂದು ಚಾಮರಾಜನಗರ ತಾಲ್ಲೂಕು, ಸಂತೇಮರಹಳ್ಳಿ ಹೋಬಳಿ, ಹೊಂಗನೂರು ಗ್ರಾಮದಲ್ಲಿ ನಡೆದಿರುವ ಗಲಭೆ/ಅಹಿತಕರ ಘಟನೆಯಲ್ಲಿ ತೀವ್ರತರವಾಗಿ ಗಾಯಗೊಂಡ ಗಾಯಾಳುಗಳಿಗೆ ಮೇಲೆ ಓದಲಾದ (2)ರ ಸರ್ಕಾರಿ ಆದೇಶದನ್ವಯ ಪರಿಹಾರ ಧನವನ್ನು ನಿಗಧಿಗೊಳಿಸಿ ಮಂಜೂರು ಮಾಡಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ/163/ಎಸ್‌ಎಸ್‌ಟಿ/2016, ಬೆಂಗಳೂರು, ದಿನಾಂಕ : 17–06–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಿನಾಂಕ : 28–04–2016 ರಂದು ಚಾಮರಾಜನಗರ ತಾಲ್ಲೂಕು, ಸಂತೇಮರಹಳ್ಳಿ ಹೋಬಳಿ, ಹೊಂಗನೂರು ಗ್ರಾಮದಲ್ಲಿ ನಡೆದಿರುವ ಗಲಭೆ/ಅಹಿತಕರ ಘಟನೆಯಲ್ಲಿ ತೀವ್ರತರವಾಗಿ ಗಾಯಗೊಂಡ ಗಾಯಾಳುಗಳಿಗೆ ಮೇಲೆ ಓದಲಾದ(2)ರ ಸರ್ಕಾರಿ ಆದೇಶದನ್ವಯ ಈ ಕೆಳಕಂಡಂತೆ ಪರಿಹಾರ ಧನವನ್ನು ನಿಗಧಿಗೊಳಿಸಿ ಮಂಜೂರು ಮಾಡಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡಂತೆ ಆದೇಶ.

| ಕ್ರ.ಸಂ. | ಹೆಸರು<br>ಶ್ರೀ/ಶ್ರೀಮತಿ | ಮಂಜೂರು ಮಾಡಲಾದ ಮೊತ್ತ<br>₹. |
|---|---|---|
| 1 | ದಾಸನಾಯಕ ಬಿನ್ ಲೇಟ್ ಪುಟ್ಟರಂಗನಾಯಕ, ಹೊಂಗನೂರು ಗ್ರಾಮ, ಚಾಮರಾಜನಗರ ತಾಲ್ಲೂಕು, ಚಾಮರಾಜನಗರ ಜಿಲ್ಲೆ. | 50,000–00 |
| 2 | ನಾಗೇಶ್ ನಾಯಕ ಬಿನ್ ನಾರಾಯಣ ನಾಯಕ, ಹೊಂಗನೂರು ಗ್ರಾಮ, ಚಾಮರಾಜನಗರ ತಾಲ್ಲೂಕು, ಚಾಮರಾಜನಗರ ಜಿಲ್ಲೆ. | 50,000–00 |

ಈ ಪರಿಹಾರ ಮೊತ್ತವನ್ನು 2016–17ನೇ ಸಾಲಿನ ಲೆಕ್ಕ ಶೀರ್ಷಿಕೆ : 2235–60–200–3–01–100ರಡಿ ಒದಗಿಸಿರುವ ಅನುದಾನದಲ್ಲಿ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ರವರು ವಿತರಿಸಲು ಮಂಜೂರಾತಿ ನೀಡಿದೆ. ಈ ಅನುದಾನದ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವಂತೆ ಜಿಲ್ಲಾಧಿಕಾರಿಗಳಿಗೆ ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯವರ ಟಿಪ್ಪಣಿ ಸಂಖ್ಯೆ : ಆಇ:353:ವೆಚ್ಚ:11:2014, ದಿನಾಂಕ : 18–07–2014 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

**P.R. 449**

**S.C. 50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಪದ್ಮಿನಿದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

## ಒಳಾಡಳಿತ ಸಚಿವಾಲಯ

**ವಿಷಯ :** ದಿನಾಂಕ : 10–11–2015 ರಂದು ಕೊಡಗು ಜಿಲ್ಲೆಯಲ್ಲಿ ಟಿಪ್ಪು ಜಯಂತಿ ಆಚರಣೆ ವೇಳೆ ಉಂಟಾದ ಗಲಭೆಯಲ್ಲಿ ಮೃತಪಟ್ಟ ಶ್ರೀ ಸಾಹುಲ್ ಹಮೀದ್ ರವರ ವೈದ್ಯಕೀಯ ಚಿಕಿತ್ಸಾ ವೆಚ್ಚವನ್ನು ಆಸ್ಪತ್ರೆಗೆ ಮರು ಪಾವತಿಸುವ ಬಗ್ಗೆ.

**ಓದಲಾಗಿದೆ :**

3) ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ, ರವರ ಕಛೇರಿ ಪತ್ರ ಸಂಖ್ಯೆ : ಎಂಎಜಿ:180:2015–16, ದಿನಾಂಕ : 14–03–2016.
4) ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ : 07 : ಸಿಆರ್‌ಆರ್ : 2015(ಭಾಗ–1), ದಿನಾಂಕ : 13–11–2015.
5) ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ, ರವರ ಕಛೇರಿ ಪತ್ರ ಸಂಖ್ಯೆ : ಎಂಎಜಿ:180:2015–16, ದಿನಾಂಕ : 12–11–2015.
6) ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ:06:ಸಿಆರ್‌ಆರ್:2014, ದಿನಾಂಕ : 18–08–2014.

**ಪ್ರಸ್ತಾವನೆ :**

ಮೇಲೆ ಓದಲಾದ (3)ರ ಜಿಲ್ಲಾಧಿಕಾರಿಗಳ ಪತ್ರದಲ್ಲಿ ದಿನಾಂಕ : 10–11–2015 ರಂದು ಕೊಡಗು ಜಿಲ್ಲೆಯಲ್ಲಿ ಟಿಪ್ಪು ಜಯಂತಿ ಆಚರಣೆ ವೇಳೆ ಉಂಟಾದ ಗಲಭೆಯಲ್ಲಿ ಮೃತಪಟ್ಟ ಶ್ರೀ ಸಾಹುಲ್ ಹಮೀದ್‌ರವರ ಕುಟುಂಬದವರಿಗೆ (4)ರ ಸರ್ಕಾರದ ಆದೇಶದನ್ವಯ ಪರಿಹಾರ ಧನವಾಗಿ, (2)ರ ಆದೇಶದಲ್ಲಿ ಪರಿಹಾರ ಧನವಾಗಿ ₹. 5.00 ಲಕ್ಷ (ರೂಪಾಯಿ ಐದು ಲಕ್ಷ ಮಾತ್ರ)ಗಳನ್ನು ಮಂಜೂರು ಮಾಡಿದೆ. ಮುಂದುವರೆದು, ಮೇಲೆ ಓದಲಾದ (1)ರ ಜಿಲ್ಲಾಧಿಕಾರಿಗಳ ಪತ್ರದಲ್ಲಿ ದಿನಾಂಕ : 10–11–2015 ರಂದು ಕೊಡಗು ಜಿಲ್ಲೆಯಲ್ಲಿ ಟಿಪ್ಪು ಜಯಂತಿ ಆಚರಣೆ ವೇಳೆ ಉಂಟಾದ ಗಲಭೆ ಹಿನ್ನೆಲೆಯಲ್ಲಿ ಮೃತಪಟ್ಟ ಶ್ರೀ ಸಾಹುಲ್ ಹಮೀದ್‌ರವರ ವೈದ್ಯಕೀಯ ಚಿಕಿತ್ಸಾ ವೆಚ್ಚವನ್ನು ಆಸ್ಪತ್ರೆಗೆ ಮರುಪಾವತಿಸುವ ಸಲುವಾಗಿ ಒಟ್ಟು ₹. 83,000/– (ರೂಪಾಯಿ ಎಂಬತ್ಮೂರು ಸಾವಿರ ಮಾತ್ರ)ಗಳನ್ನು ಬಿಡುಗಡೆಗೊಳಿಸಲು ಜಿಲ್ಲಾಧಿಕಾರಿಗಳು ಕೊಡಗು ಜಿಲ್ಲೆ, ಮಡಿಕೇರಿರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿರವರ ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ದಿನಾಂಕ : 10–11–2015 ರಂದು ಕೊಡಗು ಜಿಲ್ಲೆಯಲ್ಲಿ ಟಿಪ್ಪು ಜಯಂತಿ ಆಚರಣೆ ವೇಳೆ ಉಂಟಾದ ಗಲಭೆಯಲ್ಲಿ ಮೃತಪಟ್ಟ ಶ್ರೀ ಸಾಹುಲ್ ಹಮೀದ್‌ರವರ ವೈದ್ಯಕೀಯ ಚಿಕಿತ್ಸಾ ವೆಚ್ಚವನ್ನು ಆಸ್ಪತ್ರೆಗೆ ಮರು ಪಾವತಿಸುವ ಸಲುವಾಗಿ ಮೇಲೆ ಓದಲಾದ (2)ರ ಸರ್ಕಾರಿ ಆದೇಶದನ್ವಯ ನಿಗಿಧಿಗೊಳಿಸಿ ಮಂಜೂರು ಮಾಡಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ/07/ಸಿಆರ್‌ಆರ್/2015 (ಭಾಗ–1), ಬೆಂಗಳೂರು, ದಿನಾಂಕ : 17–06–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಿನಾಂಕ : 10–11–2015 ರಂದು ಕೊಡಗು ಜಿಲ್ಲೆಯಲ್ಲಿ ಟಿಪ್ಪು ಜಯಂತಿ ಆಚರಣೆ ವೇಳೆ ಉಂಟಾದ ಗಲಭೆಯಲ್ಲಿ ಮೃತಪಟ್ಟ ಶ್ರೀ ಸಾಹುಲ್ ಹಮೀದ್‌ರವರ ಕುಟುಂಬದವರಿಗೆ ವೈದ್ಯಕೀಯ ಚಿಕಿತ್ಸಾ ವೆಚ್ಚವನ್ನು ಆಸ್ಪತ್ರೆಗೆ ಮರುಪಾವತಿಸುವ ಸಲುವಾಗಿ ಚಿಕಿತ್ಸೆಗೆ ತಗುಲಿದ ವೆಚ್ಚವಾದ ₹. 83,000/– (ರೂಪಾಯಿ ಎಂಬತ್ಮೂರು ಸಾವಿರ ಮಾತ್ರ)ಗಳನ್ನು ಸರ್ಕಾರವು ಮಂಜೂರು ಮಾಡಿದೆ.

ಈ ಪರಿಹಾರ ಮೊತ್ತವನ್ನು 2016–17ನೇ ಸಾಲಿನ ಲೆಕ್ಕ ಶೀರ್ಷಿಕೆ 2235–60–200–3–01–100ರಡಿ ಒದಗಿಸಿರುವ ಅನುದಾನದಲ್ಲಿ ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿರವರು ವಿತರಿಸಲು ಮಂಜೂರಾತಿ ನೀಡಿದೆ. ಈ ಅನುದಾನದ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವಂತೆ ಜಿಲ್ಲಾಧಿಕಾರಿಗಳಿಗೆ ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯವರ ಟಿಪ್ಪಣಿ ಸಂಖ್ಯೆ : ಆಇ:254:ವೆಚ್ಚ:11:2016, ದಿನಾಂಕ : 01–06–2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

P.R. 450
S.C. 50

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಪದ್ಮಿನಿದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

## ಸಹಕಾರ ಸಚಿವಾಲಯ

**ವಿಷಯ :** 2016–17ನೇ ಸಾಲಿಗೆ ನಿರ್ದೇಶನ ಮತ್ತು ಆಡಳಿತ–125–ಆಧುನೀಕರಣ ಯೋಜನೆಯಡಿ ಅನುದಾನ ಬಿಡುಗಡೆ ಕುರಿತು ಆದೇಶ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ: ಸಇ 115 ರರವಿ 2016, ಬೆಂಗಳೂರು, ದಿನಾಂಕ: 26–4–2016.
2) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಆರ್‌ಸಿಎಸ್/ಎಸ್‌ವಿಬಿ/09/2016–17, ದಿನಾಂಕ : 22–05–2016.
3) ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ/03/ಟಿಎಫ್‌ಪಿ/2016, ಬೆಂಗಳೂರು, ದಿನಾಂಕ : 02–04–2016.

**ಪ್ರಸ್ತಾವನೆ :**

ಸಹಕಾರ ಇಲಾಖೆಯಲ್ಲಿ 2016–17ನೇ ಸಾಲಿನಲ್ಲಿ ನಿರ್ದೇಶನ ಮತ್ತು ಆಡಳಿತ ಆಧುನೀಕರಣ ಯೋಜನೆಯನ್ನು ಮುಂದುವರೆಸಲಾಗಿದೆ. ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಈ ಯೋಜನೆಯನ್ನು 2016–17ನೇ ಸಾಲಿಗೆ ಮುಂದುವರೆಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

R.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯಡಿ ₹. 20.00 ಲಕ್ಷಗಳ ಅನುದಾನದ ಪೈಕಿ ಮೊದಲನೇ ತ್ರೈಮಾಸಿಕ ಕಂತಿನ $^{1}/_{4}$ ಭಾಗದ ಮೊಬಲಗು ₹. 5.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 380 ಸಿಎಲ್‌ಎಸ್ 2016, ಬೆಂಗಳೂರು, ದಿನಾಂಕ : 17–06–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2016–17ನೇ ಸಾಲಿನ ಯೋಜನಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಲೆಕ್ಕ ಶೀರ್ಷಿಕೆ 2425–00–001–0–01–125 ನಿರ್ದೇಶನ ಮತ್ತು ಆಡಳಿತ ಆಧುನೀಕರಣ ಯೋಜನೆಯಲ್ಲಿ ₹. 20.00 ಲಕ್ಷಗಳ ಅನುದಾನದ ಪೈಕಿ ಮೊದಲನೇ ಕಂತಾಗಿ ₹. 5.00 ಲಕ್ಷ (ಐದು ಲಕ್ಷ ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಿದೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ನಿಬಂಧಕರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ. ಈ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 3 ಟಿಎಫ್‌ಪಿ 2016, ದಿನಾಂಕ : 02–04–2016ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಸಇ 67 ಆಂಆಸ(ಎ) 2016, ದಿನಾಂಕ : 08–06–2016ರಲ್ಲಿ ನೀಡಲಾದ ಸಹಮತಿಯ ಮೇರೆಗೆ ಹೊರಡಿಸಿದೆ.

**P.R. 451**

**S.C. 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಧಾಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಹಕಾರ ಇಲಾಖೆ.

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59